ರಾವಸಾಹೇಬ ಮಲ್ಲಪ್ಪಾ ಬಸಪ್ಪಾ ವಾರದ
ಇವರ ಉದಾರ ಆಶ್ರಯದ ಕೆಳಗೆ ಪ್ರಸಿದ್ಧ ವಾ
ಗತಕ್ಕ ವೀರಶೈವಲಿಂಗಿಬ್ರಾಹ್ಮಣಧರ್ಮ
ಗ್ರಂಥಮಾಲಾಂತರ್ಗತ ಶಿವಾಗಮ
ಪುರಾಣಾದಿಗಳಲ್ಲಿ ಹೇಳಿದ

# ವಿರಕ್ತೋತ್ಪತ್ತಿಕ್ರಿಯಾಲಕ್ಷಣಂ

ಎಂಬ ಗ್ರಂಥವು ಕನ್ನಡ ಭಾಷಾಂತರದೊಡನೆ ವೇದಮೂರ್ತಿ
ಮಣೂರ ಮಠಾಧ್ಯಕ್ಷ ಮಲ್ಲಿಕಾರ್ಜುನಶಾಸ್ತ್ರಿ
ಯಿಂದ ವಿಜಾಪುರದಲ್ಲಿ
"ಗ್ರಾಮಾಧಿಕಾರಿ" ಮುದ್ರಾಲಯದಲ್ಲಿ ಮುದ್ರಿಸಿ
ಪ್ರಸಿದ್ಧ ಮಾಡಲ್ಪಟ್ಟಿತು.

ಆವೃತ್ತಿ ೧ ನೆಯದು. ಪ್ರತಿ ೨೦೦೦.

ಶಕ ೧೮೩೪. ಸಂನ ೧೯೦೨.

 ಇವರಿಂದ ಈ ಗ್ರಂಥದಲ್ಲಿ ಹೇಳಿದ ಪ್ರಕಾರ ಭಾವಿ ಶ್ರೀ ಚಿತ್ರಕಲದುರ್ಗದ ಶೂನ್ಯ ಸಿಂಹಾಸನಪಟ್ಟಾಧಿಕಾರಿ ಶ್ರೀಮನ್ಮಹಾನಿರಂಜನ ಜಗದ್ಗುರು ಮುರುಗ್ಯಾರಾಜೇಂದ್ರ ಮಹಾಸ್ವಾಮಿಗಳು ಸ್ವಧರ್ಮೋನ್ನತಿ ಭಕ್ತಪಾವನ ಮಾಡುವದಕ್ಕೆ ಯೋಗ್ಯರೆಂದು ಇವರ ಪಾದಸನ್ನಿಧಿಗೆ ಸಮರ್ಪಣ ಮಾಡಲ್ಪಟ್ಟಿರುತ್ತದೆ.

ಕ್ರಯ ೪ ಆಣೆ.

॥ ಶ್ರೀರಸ್ತು ॥

## ( ಪ್ರಸ್ತಾವನೆ )

ವೀರಶೈವ ಲಿಂಗಿಬ್ರಾಹ್ಮಣ ಮಹಾಶಯರೇ,

ಲೋಕದಲ್ಲಿ ವೀರಶೈವ ಮತಾನುವರ್ತಿಗಳಾಳ ಸರ್ವರಿಗೂ ನಿರಾಭಾರಿ ಜಂಗಮಲಕ್ಷಣವನ್ನು ತಿಳಿದುಕೊಳ್ಳುವದು ಅತ್ಯವಶ್ಯಕವಾಗಿದೆ. ಆದ್ದರಿಂದ ನಿರಾಭಾರಿ ಜಂಗಮ ಲಕ್ಷಣವನ್ನು ಬೋಧಿಸುವ ಗ್ರಂಥಗಳು ಬಹು ವಿರಳವಾಗಿ ದುರ್ಲಭವಾದ್ದರಿಂದ ಸರ್ವ ವೀರಶೈವ ಮಹನೀಯರು ಜಂಗಮಲಕ್ಷಣವನ್ನು ಬೋಧಿಸುವ ಗ್ರಂಥಗಳನ್ನು ಪ್ರಕಟನ ಗೊಳಿಸುವ ಬಗ್ಗೆ ಬಹು ರೀತಿಯಾಗಿ ಪ್ರೊತ್ಸಾಹಿಸಿದ್ದರಿಂದ ಶ್ರೀಮದ್ಭುವನಭವನಾರಂಭಸ್ತಂಭಾಯಮಾನ ಪರಶಿವಾವತಾರಿನಿರಂಜನಜಂಗಮೋತ್ಪತ್ತಿಯೇ ಮೊದಲಾದ ವಿಷಯಗಳಿಂದ ಗರ್ಭೀಕೃತವಾಗಿಯೂ ಸಪ್ರಮಾಣಗಳಾಗಿಯೂ ಇರುವ ಉತ್ತರವಾತುಲತಂತ್ರ, ಸೂಕ್ಷ್ಮಾಗಮ, ಶಂಕರಸಂಹಿತೆ, ಪಾರಮೇಶ್ವರಾಗಮ, ಸುಪ್ರಬೋಧಾಗಮ, ವ್ಯಾಸಕೃತ ಭವಿಷತ್ಪುರಾಣಾಂತರ್ಗತ ಪ್ರಭುಲಿಂಗಲೀಲೆ ಮುಂತಾದ ಗ್ರಂಥಗಳನ್ನು ಬಹು ಪ್ರಯಾಸಪೂರ್ವಕವಾಗಿ ಸಂಪಾದಿಸಿ ಅವುಗಳಲ್ಲಿ ಇರುವ ನಿರಾಭಾರಿಗಳ ಉತ್ಪತ್ತಿ, ಆಚರಣೆ ಮುಂತಾದ ವಿಷಯಗಳಿಗೆ ಸಂಬಂಧಿಸಿದ ವಿಷಯಗಳನ್ನು ತೆಗಿದುಕೊಂಡು ಸ್ವಕಪೋಲ ಕಲ್ಪಿತಗಳಲ್ಲದ ಪ್ರಮಾಣಗಳೊಡನೆ ಕನ್ನಡ ಭಾಷಾಂತರ ಸಹಿತವಾಗಿರುವ ವಿರಕ್ತೋತ್ಪತ್ತಿ ಕ್ರಿಯಾಲಕ್ಷಣವೆಂಬೀ ಗ್ರಂಥವನ್ನು ರಚಿಸಿ ಪರಿಶೋಧನಮಾಡಿ ಮಧ್ಯದಲ್ಲಿ ಚಿತ್ರಕಲದುರ್ಗದ ಶ್ರೀಜಗದ್ಗುರು ನಿರಾಭಾರಿ ಸ್ವಾಮಿಗಳವರ ವಂಶಾವಳಿಯುನ್ನು ಜೋಡಿಸಿ ಮುದ್ರಣ ಮಾಡಿಸಿ ಪ್ರಸಿದ್ಧಿಗೊಳಿಸಿದ್ದೇವೆ.

ಚಿನ್ಮೂಲಾದ್ರಿ ಅಂದರೆ ಚಿತ್ರಕಲದುರ್ಗದ ಬ್ರಹನ್ಮಠದ ಶೂನ್ಯ ಸಿಂಹಾಸನಕ್ಕೆ ಅಧಿಪತಿಗಳು ಸ್ವಲ್ಪ ಕಾಲದೊಳಗೆ ಆಗತಕ್ಕವರು ಇದ್ದಾರೆ. ಆದ್ದರಿಂಡ ಸಹೃದಯಹೃದಯಾಲ್ಹಾದಕವಾದ ಈ ಮಹೋತ್ಸವ ಸಮಯದಲ್ಲಿ ಈ ಗ್ರಂಥವನ್ನು ಭಕ್ತಿಪುರಸ್ಸರವಾಗಿ ಶ್ರೀಮಹಾಸ್ವಾಮಿಗಳವರ ಸನ್ನಿಧಿಗೆ ಸಮರ್ಪಿಸಿದ್ದೇವೆ.

॥ ಶ್ರೀರಸ್ತು ॥

# ವೀರಶೈವೋತ್ಪತ್ತಿಃ–

## ಉತ್ತರವಾತುಲೇ ಪ್ರಮಥಪರಶಿವಸಂವಾದೇ

ಮಂದರಾದ್ರೌ ಗಣಾಸ್ಸರ್ವೇ ಸಮೇತಾಃ ಪರಮೇಶ್ವರಂ। ನಿರಂಜನವಿಭೋರ್ಲೀಲಾಂ ಭಾವಿನೀಂ ಭವನಾಶಿನೀಂ॥೧॥ ಜಿಜ್ಞಾಸವಃ ಪರಶಿವಂ ಪ್ರಾರ್ಥಯಾಮಾಸುರಾದರಾತ್ । ಏವಂ ಗಣೈಃ ಪ್ರಾರ್ಥ್ಯಮಾನಃ ಶಿವಃ ಪ್ರೋವಾಚ ಲೀಲಯಾ ॥ ೨ ॥ ಮಚ್ಛಿಖಾಚಕ್ರಮಧ್ಯಸ್ಥಂ ಚರಲಿಂಗಂ ನಿರಂಜನಂ। ದೀಪ್ತಮಾವಿರಭೂತ್ಸಾಕ್ಷಾನ್ಮೋಕ್ಷಸಾಮ್ರಾಜ್ಯದಾಯಕಂ ॥೩॥ ಮಮೈತಚ್ಚರಲಿಂಗಂ ತು ಮತ್ತಃ ಶತಗುಣಾಧಿಕಂ। ಯುಕ್ತೋಽಹಂ ಪರಯಾ ಶಕ್ತ್ಯಾ ಶಕ್ತ್ಯತೀತಮಿದಂ ಗಣಾಃ ॥ ೪ ॥ ಇದಂ ತು ನಿಷ್ಕಲಂ ಜ್ಞೇಯಂ ಸಕಲೋಽಹಂ ಗಣೇಶ್ವರಾಃ । ವರ್ಣೇನಾಹಂ ಸಮಾಯುಕ್ತೋ ವರ್ಣಾ

---

# ವೀರಶೈವರ ಉತ್ಪತ್ತಿ.

## ಉತ್ತರವಾತುಲದಲ್ಲಿ ಪ್ರಮಥರಿಗೂ ಶಿವನಿಗೂ ನಡೆದ ಸಂವಾದದೊಳಗಿನದು–

॥ ೧ ॥ ಮಂದರ ಪರ್ವತದಲ್ಲಿ ಗಣಗಳೆಲ್ಲರೂ ಕೂಡಿ, ನಿಷ್ಕಲಂಕನಾದ ಪರಮೇಶ್ವರನ, ಮುಂದೆ ಸಂಭವಿಸ ತಕ್ಕಂಥಾದೂ ಸಂಸಾರ ಪಾಶದಿಂದ ಬಿಡುಗಡೆ ಮಾಡುವಂಥಾದೂ ಆದ ಲೀಲೆಯನ್ನು ॥ ೨ ॥ ತಿಳು ಕೊಳ್ಳುವ ಮನಸ್ಸು ಉಳ್ಳವರಾಗಿ ಆದರದಿಂದ ಪರಶಿವನಿಗೆ ಪ್ರಾರ್ಥನೆ ಮಾಡಿ ಕೊಂಡರು.
ಈ ಪ್ರಕಾರ ಗಣಗಳಿಂದ ಪ್ರಾರ್ಥಿಸಲ್ಪಟ್ಟ ಶಿವನು ಲೀಲೆಯಿಂದ ಅಂದನು; ಏನಂದರೆ–

॥ ೩ ॥ ನನ್ನ ಮಸ್ತಕದೊಳಗಿರುವ ಚಕ್ರದ ಮಧ್ಯದಲ್ಲಿ, ಮೋಕ್ಷವನ್ನು ಕೊಡುವಂಥಾದೂ ನಿಷ್ಕಲಂಕವಾದದೂ ಪ್ರಕಾಶಿಸುವಂಥಾದೂ ಆದ ಸಾಕ್ಷಾತ್ ಚರಲಿಂಗವು ಪ್ರತ್ಯಕ್ಷವಾಯಿತು. ॥ ೪ ॥ ಈ ನನ್ನ ಚರಲಿಂಗವು ನನಗಿಂತ ನೂರು ಪಾಲು ಹೆಚ್ಚಿನದು. ನಾನು ಶ್ರೇಷ್ಠವಾದ ಶಕ್ತಿಯಿಂದ ಕೂಡಿದ್ದೇನೆ; ಅದು ಶಕ್ತಿಯನ್ನು ಮೀರಿದ್ದು. ॥ ೫ ॥ ನಾನು ಕಲಾಯುಕ್ತನು; ಅದು ಕಲೆಗಳಿಲ್ಲದ್ದು. ನಾನು ವರ್ಣ ಉಳ್ಳವನು; ಅದು ವರ್ಣವ

ಶೀತಮಿದಂ ಗಣಾ: ॥ ೫॥ ಆದೌ ತಚ್ಚರಲಿಂಗಂ ತು ನಿರಂಜನ ಇತಿ ಸ್ಮೃತಂ । ತ್ರೇತಾಯಾಂ ದ್ಯೈವತಂ ಚೈತನ್ನಿರ್ಮಾಯ ಇತಿ ಕೀರ್ತಿತಂ ॥ ೬ ॥ ದ್ವಾಪರೇ ನಿಷ್ಕಲಶ್ಚೇತಿ ವಿಶ್ರುತಂ ಚ ತದೇವ ಹಿ। ಕಲೌ ಪ್ರಭುರಿತಿ ಖ್ಯಾತಂ ತಸ್ಯ ನಾಮಾನಿ ವೈ ಕ್ರಮಾತ್ ॥ ೭ ॥ ಕಲೌ ತತ್ಪ್ರಭುದೇವಸ್ಯ ಪೀಠಂ ಕಲ್ಯಾಣಪತ್ತನೇ। ಬಸವೇಶಾದಿಪ್ರಮಥಸಂದೋಹಪರಿಕಲ್ಪಿತಂ ॥ ೮ ॥ ತ್ರಿಚೈತನ್ಯಂ ತ್ರಿಕಂ ಶೂನ್ಯಂ ನಾದಬಿಂದುಕಲಾತ್ಮಕಂ। ಪ್ರಣವಂ ನಿರ್ಗುಣಂ ತತ್ತು ಸರ್ವಶೂನ್ಯಂ ತ್ರಿಧಾ ಸ್ಥಿತಂ ॥ ೯ ॥ ತ್ರಿಪೃಕ್ಪ್ರಣವಗರ್ಭತ್ವಾತ್ತ್ರಿಪೀಠತ್ವಾತ್ತ್ರಿಧಾ ಮತಂ। ಶೂನ್ಯಸಿಂಹಾಸನಂ ಚೇತಿ ಸರ್ವತ: ಪ್ರಥಿತಂ ಭುವಿ ॥೧೦॥ ಭಕ್ತಾಧೀನತಯಾ ಗತ್ವಾ ಶ್ರೀಮದ್ಬಸವಮಂದಿರಂ। ಪೀಠಮಾರುಹ್ಯ ಭಗವಾನ್ ಪ್ರಭು: ಪ್ರಮಥರಾಟ್ ತದಾ ॥೧೧॥ ಬಸವೇಶ್ವರಮುಖ್ಯಾನಾಂ ಜ್ಞಾನದೀಕ್ಷಾಮನುಗ್ರಹಾತ್। ವಿಧಾಯ ಸರ್ವವೇದಾಂತಸಾರಸಂಗ್ರಹರೂಪಕಂ ॥೧೨॥ ಲಿಂಗಾಂಗಸಾಮರಸ್ಯಂ ಹಿ ಬೋಧಯಿತ್ವಾ ತು ಸಂ-

---

ನ್ನು ಮೀರಿದ್ದು. ॥ ೬ ॥ ಈ ಚರಲಿಂಗಕ್ಕೆ ಕೃತಯುಗದಲ್ಲಿ ನಿರಂಜನವೆಂತಲೂ, ತ್ರೇತಾಯುಗದಲ್ಲಿ ನಿರ್ಮಾಯವೆಂತಲೂ, ॥ ೭ ॥ ದ್ವಾಪರದಲ್ಲಿ ನಿಷ್ಕಲವೆಂತಲೂ, ಕಲಿಯುಗದಲ್ಲಿ ಪ್ರಭುವೆಂತಲೂ, ಕ್ರಮದಿಂದ ಹೆಸರುಗಳು ಬಂದಿವೆ. ॥ ೮ ॥ ಕಲಿಯುಗದಲ್ಲಿ ಆ ಪ್ರಭುದೇವನ ಪೀಠವು ಬಸವೇಶ್ವರನೇ ಮೊದಲಾದ ಪ್ರಮಥರಿಂದ ಕಲ್ಯಾಣ ಪಟ್ಟಣದಲ್ಲಿ ಸ್ಥಾಪಿಸಲ್ಪಡುವದು. ॥ ೯ ॥ ಅದು ಮೂರು ಚೈತನ್ಯಗಳು ಉಳ್ಳಂಥಾದೂ; ಒಂದರಲ್ಲಿಯೇ ಮೂರು ರೂಪುಗಳುಳ್ಳದ್ದೂ; ನಾದ, ಬಿಂದು, ಕಲಾ, ಮಯವಾದದ್ದೂ; ಶೂನ್ಯರೂಪವಾದದ್ದೂ; ಓಂಕಾರವೂ; ನಿರ್ಗುಣವೂ; ಸರ್ವಶೂನ್ಯವೂ; ಮೂರು ಭೇದದಿಂದ ಇರುವಂಥಾದೂ ಆಗಿರುತ್ತದೆ. ॥ ೧೦ ॥ ಮೂರು ಪಾಲು ಓಂಕಾರವು ಆ ಪೀಠದಲ್ಲಿ ಇರುವದರಿಂದ ಅದಕ್ಕೆ ಮೂರು ಭೇದದಿಂದ ಇರುವಂಥಾದು ಎಂದು ಅನ್ನುತ್ತಾರೆ. ಇದೇ ಕಾರಣದಿಂದಲೇ ಅದು ಶೂನ್ಯಸಿಂಹಾಸನವೆಂತಲೂ ಜಗತ್ತಿನಲ್ಲಿ ಪ್ರಸಿದ್ಧವಾಗಿದೆ. ॥ ೧೧ ॥ ಪ್ರಮಥಗಣಗಳಿಗೆ ಅಧಿಪತಿಯಾದ ಆ ಭಗವಂತನಾದ ಪ್ರಭುವು ಭಕ್ತರಿಗೆ ವಶನಾದದ್ದರಿಂದ ಶ್ರೀಮದ್ ಬಸವೇಶ್ವರನ ಮಂದಿರಕ್ಕೆ ಹೋಗಿ, ಆಸನದಲ್ಲಿ ಕುಳಿತು ಕೊಂಡು, ॥ ೧೨ ॥ ಬಸವೇಶ್ವರ ಮೊದಲಾದವರಿಗೆ ಅನುಗ್ರಹದಿಂದ ಜ್ಞಾನದೀಕ್ಷೆಯನ್ನು ಕೊಟ್ಟು, ಎಲ್ಲ ವೇದಾಂತಗಳ ಸಾರವನ್ನು ಕೂಡಿಸುವ, ॥ ೧೩ ॥ ಲಿಂಗಧಾರಣರಹಸ್ಯವನ್ನು ಸ್ಪಷ್ಟವಾ-

ಸ್ಥಿತಂ । ತತಸ್ತೇಭ್ಯ: ಪ್ರಸಾದಾದಿ ದತ್ವಾ ಸರ್ವಮಲಾಪಹಂ ॥೧೩॥ ಪಾ
ವಯಿತ್ವಾಖಿಲಾಂಸ್ತತ್ರ ಶ್ರೀಚೆನ್ನಬಸವಾಂಕಿತಂ । ಸ್ಥಲಷಟ್ಕೇಯುಸಂಪತ್ತಿಗರಿ
ಷ್ಠಂ ಬ್ರಹ್ಮಚಾರಿಣಂ ॥ ೧೪ ॥ ವಿಲೋಕ್ಯ ಕೃಪಯಾ ದೃಷ್ಟ್ಯಾ ತಮಾಹೂ
ಯಾಂತಿಕೇ ವಿಭು: । ಸ್ವಮುದ್ರಣಂ ಸ್ವಾಶ್ರಮಂ ಚ ಪೀಠಮಾಚಾರಪುಸ್ತ
ಕಂ ॥ ೧೫ ॥ ಸಂಪ್ರದಾಯೈವಮೇವೈತನ್ಮತಸ್ಯ ಪರಿಪಾಲನಂ । ಕುರುಷ್ವ
ಲೋಕೋದ್ಧರಣಾರ್ಥಂ ಶಿಷ್ಯಪಂಕ್ತಿಂ ಪ್ರವರ್ಧಯ ॥ ೧೬ ॥ ಇತ್ಥಂ ಪ್ರ
ಶಾಸ್ಯ ಭಗವಾನ್ನಿರಂಜನವಿಭುಸ್ತದಾ । ಗಣಾಧ್ಯಕ್ಷೈಸ್ಸಮಂ ಲೋಕಹಿ
ತಾರ್ಥಂ ಸಂಚರನ್ ಭುವಿ ॥ ೧೭ ॥ ಭಕ್ತೌಘಾಘವಿನಾಶಾರ್ಥಂ ದೀಕ್ಷಾಶಿ
ಕ್ಷಾದಿಕಂ ತಥಾ । ವಿಧಾಯಾಥ ಸಮಸ್ತೇಷು ದೇಶೇಷ್ವಪಿ ಹಿತೇಚ್ಛಯಾ
॥ ೧೮ ॥ ವಿಸ್ತಾರ್ಯ ಮಾಮಕಂ ಧರ್ಮಂ ಪುನರ್ಮಾಂ ಸಮುಪೇಷ್ಯತಿ ।
ತತಸ್ತದ್ವಂಶಜಾ ಭೂಮೌ ತದಾಚರಣಸಂಯುತಾ: ॥ ೧೯ ॥ ಸರ್ವಭ
ಕ್ತಾನುಗ್ರಹಾರ್ಥಮಟಿತ್ವಾ ಭೂತಲೇಽಖಿಲೇ । ತತ್ರ ತತ್ರ ಮಠಾನ್ ಸಾ

---

ಗಿ ತಿಳಿಸಿ, ಆ ಮೇಲೆ ಅವರಿಗೆ ಎಲ್ಲಾ ದೋಷಗಳನ್ನು ಪರಿಹಾರ ಮಾ
ಡುವ ಪ್ರಸಾದ ಮೊದಲಾದದ್ದನ್ನು ಕೊಟ್ಟು, ॥ ೧೩ ॥ ಎಲ್ಲರನ್ನು ಪವಿತ್ರ
ರಾಗಿ ಮಾಡಿ, ಅಲ್ಲಿಯೇ ಷಟ್‌ಸ್ಥಲಗಳೆಂಬ ಸಂಪತ್ತಿಯುಳ್ಳವನಾದದ್ದರಿಂದ
ಶ್ರೇಷ್ಠನೂ ಬ್ರಹ್ಮಚಾರಿಯೂ ಆದ ಶ್ರೀಚೆನ್ನಬಸವನೆಂಬವನನ್ನು ॥ ೧೪ ॥
ಕೃಪಾದೃಷ್ಟಿಯಿಂದ ನೋಡಿ, ಹತ್ತಿರಕ್ಕೆ ಕರೆದು, ತನ್ನ ಮುದ್ರೆಗಳನ್ನೂ, ಆ
ಶ್ರಮವನ್ನೂ ಪೀಠವನ್ನೂ ಆಚಾರದ ಪುಸ್ತಕವನ್ನೂ ಆತನಿಗೆ ಕೊಟ್ಟು,
॥ ೧೫ ॥ ಇದೇ ರೀತಿಯಿಂದಲೇ ಈ ಮತವನ್ನು ಪಾಲಿಸುತ್ತ ಲೋಕದ
ಉದ್ಧಾರಕ್ಕಾಗಿ ಶಿಷ್ಯಸಮೂಹವನ್ನು ಬೆಳಿಸು ॥ ೧೬ ॥ ಎಂದು ಆಜ್ಞೆ ಮಾ
ಡಿ, ಆ ಮೇಲೆ ಭಗವಂತನಾದ ಆ ನಿರಂಜನ ಪ್ರಭುವು ಗಣಶ್ರೇಷ್ಠರಿಂದ
ಕೂಡಿ ಕೊಂಡು ಲೋಕಕಲ್ಯಾಣಾರ್ಥವಾಗಿ ಭೂಮಿಯಲ್ಲಿ ಸಂಚಾರ ಮಾ
ಡುತ್ತಾ ॥ ೧೭ ॥ ಭಕ್ತರ ಪಾಪಗಳನ್ನು ಪರಿಹಾರ ಮಾಡುವದಕ್ಕಾಗಿ
ದೀಕ್ಷೆಯನ್ನೂ ಜ್ಞಾನೋಪದೇಶವನ್ನೂ ಮಾಡಿ, ಎಲ್ಲಾ ದೇಶಗಳಲ್ಲಿ ಲೋ
ಕಕಲ್ಯಾಣಾರ್ಥವಾಗಿ ॥ ೧೮ ॥ ನನ್ನ ಧರ್ಮವನ್ನು ಹಬ್ಬಿಸಿ, ಪುನಃ ನನ್ನ
ಹತ್ತಿರಕ್ಕೆ ಬರುವನು. ಆ ಮೇಲೆ ಭೂಮಿಯಲ್ಲಿ ಆತನ ವಂಶದವರು ಆತನು
ಹೇಳಿ ಕೊಟ್ಟ ಆಚರಣದಿಂದ ಕೂಡಿದವರಾಗಿ ॥ ೨೦ ॥ ಭಕ್ತರಿಗೆ ಅನು
ಗ್ರಹ ಮಾಡುವದಕ್ಕಾಗಿ ಭೂಮಿಯಲ್ಲೆಲ್ಲಾ ಸಂಚಾರ ಮಾಡಿ, ಅಲ್ಲಲ್ಲಿ ಮ

ಪಯಿತ್ವಾ ದೀಕ್ಷಾದಿಕಾವಪಿ ॥ ೨೦॥ ಸಂಸ್ಕಾರಾನ್ ಬಹುಧಾ ಕೃತ್ವೈವೋ ದ್ಧರಿಷ್ಯಂತಿ ಮನ್ಮತಂ ।

ಠಗಳನ್ನು ಸ್ಥಾಪಿಸಿ ದೀಕ್ಷೆ ಮೊದಲಾದ ॥ ೨೧ ॥ ಸಂಸ್ಕಾರಗಳನ್ನು ಬಹಳ ವಾಗಿ ಮಾಡಿ ನನ್ನ ಮತವನ್ನು ಉದ್ಧಾರ ಮಾಡುವರು.

———o———

# ಚಿತ್ರಕಲದುರ್ಗದ ವಿರಕ್ತಾಚಾರಿ ಸ್ವಾಮಿಗಳವರ ವಂಶಾವಳಿಯು.

ಈ ಕಲಿಯುಗದಲ್ಲಿ ಶಿವಾಚಾರ ಮತಕ್ಕೆ ಷಟ್‌ಸ್ಥಲ ಬ್ರಹ್ಮರಾದ ಷಣ್ಮುಖ ಸ್ವಾಮಿಯುವರು ಮೂಲ ಗುರುವು. ಅವರ ತರುವಾಯ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಅಲ್ಲಮ ಪ್ರಭುವು ಶೂನ್ಯಸಿಂಹಾಸನಾರೂಢರಾದರು.

೧

ಚೆನ್ನಬಸವಣ್ಣನವರು ಶೂನ್ಯಸಿಂಹಾಸನಕ್ಕೆ ಮೊದಲನೆಯ ಅಧಿಪತಿಗಳಾಗಿ ಕೆಲವು ದಿವಸ ಇದ್ದು ಅನೇಕ ಮಹತ್ವಗಳನ್ನು ಮಾಡಿ ಉಳವಿಗೆ ದಯ ಮಾಡಿಸಿದರು. ಉಳವಿಯಲ್ಲಿ ಇರುವ ಇವರ ಮಠವೇ ಇದಕ್ಕೆ ದೃಷ್ಟಾಂತವು.

೨

ಎರಡನೆಯ ಪಟ್ಟವು ತೋಟದ ಸಿದ್ಧೇಶ್ವರ ಸ್ವಾಮಿಯುವರಿಗೆ ಆಯಿತು. ಇವರೂ ಅನೇಕ ಮಹತ್ವಗಳನ್ನು ಮಾಡಿ ಕಡೆಯಲ್ಲಿ ಎಡವೂರಲ್ಲಿ ಲಿಂಗೈಕ್ಯರಾದರು. ಅದೇ ಊರಲ್ಲಿ ಇವರ ತೋರ ಗದ್ದಿಗೆ ಅದೆ.

೩

ಮೂರನೆಯ ಪಟ್ಟವು ನಿರಕ್ಷರದ ಬೋಳ ಬಸವೇಶ್ವರ ಸ್ವಾಮಿಯುವರಿಗೆ ಆಯಿತು. ತೋಟದ ಸಿದ್ಧೇಶ್ವರರ ಅನುಗ್ರಹದಿಂದ ಇವರು ಸಮಸ್ತ ವಿದ್ಯಾಪಾರಂಗತರಾಗಿ ಅನೇಕ ಮಹತ್ವಗಳನ್ನು ಮಾಡಿ ಮಧುಗಿರಿ( ಮದ್ಗಿರಿ )ಯಲ್ಲಿ ಬಯಲಾದರು. ಅಲ್ಲಿಯೇ ಇವರ ತೋರ ಗದ್ದಿಗೆ ಅದೆ.

೪

ನಾಲ್ಕನೆಯ ಪಟ್ಟವು ಸಿದ್ಧವೀರ ಸ್ವಾಮಿಯುವರಿಗೆ ಆಯಿತು. ಇವರ ತೋರಗದ್ದಿಗೆ ಗುಮ್ಮಳಾಪುರದಲ್ಲಿ ಇರುತ್ತದೆ.

೫

ಐದನೆಯ ಪಟ್ಟವು ಸಿದ್ಧವೀರ ಸ್ವಾಮಿಯುವರಿಗೆ ಆಯಿತು. ಇವರ ತೋರ ಗದ್ದಿಗೆ ಗುಳೂರಲ್ಲಿ ಇರುತ್ತದೆ.

೬

ಆರನೆಯ ಪಟ್ಟವು ಗಗನ ಸ್ವಾಮಿಗಳವರಿಗೆ ಆಯಿತು. ಇವರ ತೋರ ಗದ್ದಿಗೆ ಭೈರವನ ದುರ್ಗದಲ್ಲಿ ಇರುತ್ತದೆ.

೭

ಏಳನೆಯು ಪಟ್ಟವು ಕಟ್ಟಿಗೆಹಳ್ಳಿ ಸ್ವಾಮಿಗಳವರಿಗೆ ಆಯಿತು. ಇವರ ತೋರ ಗದ್ದಿಗೆ ತಿಳುವಳ್ಳಿಯಲ್ಲಿ

೮

ಎಂಟನೆಯು ಪಟ್ಟವು ಇಮ್ಮಡಿ ಮುರಿಗ್ಯಾರಾಜೇಂದ್ರ ಸ್ವಾಮಿಗಳವರಿಗೆ ಆಯಿತು. ಇವರು ಡಿಳ್ಳಿ ಶಹರಕ್ಕೆ ದಯ ಮಾಡಿಸಿ ಅಲ್ಲಿಂದ ಶಿಖಾಶೈಲಗಳನ್ನು ಶೂನ್ಯಸಿಂಹಾಸನಕ್ಕೆ ತಂದು ಚಿತ್ರದುರ್ಗದಲ್ಲಿ ಮಠ ಕಟ್ಟಿಸಿ ಮಹತ್ವಗಳನ್ನು ಮಾಡಿ ಅಲ್ಲಿಯೇ ಬಯಲಾದರು. ಇವರ ತೋರ ಗದ್ದಿಗೆ ಬೃಹನ್ಮಠದಲ್ಲಿ.

೯

ಇಮ್ಮಡಿ ಗುರುಸಿದ್ಧ ಸ್ವಾಮಿಗಳವರಿಗೆ ಶಿಖಾಪಟ್ಟವು ಆಯಿತು. ಇವರ ತೋರ ಗದ್ದಿಗೆ ಅನಂತಪುರದಲ್ಲಿ.

೧೦

ಸ್ವಾದಿಯ ಚೆನ್ನಬಸವರಾಜೇಂದ್ರ ಸ್ವಾಮಿಗಳವರಿಗೆ ಶಿಖಾಪಟ್ಟವು ಆಯಿತು. ಇವರ ತೋರ ಗದ್ದಿಗೆ ಮಾಗಡಿಯಲ್ಲಿ.

೧೧

ಶಿರಹಟ್ಟಿಯ ಸಿದ್ಧಲಿಂಗ ಸ್ವಾಮಿಗಳವರಿಗೆ ಶಿಖಾಪಟ್ಟವು ಆಯಿತು. ಇವರ ತೋರಗದ್ದಿಗೆ ಜಂಗಡಿಯಲ್ಲಿ.

೧೨

ಗುರುಪಾದ ಸ್ವಾಮಿಗಳವರಿಗೆ ಶಿಖಾಪಟ್ಟವು ಆಯಿತು. ಇವರ ತೋರಗದ್ದಿಗೆ ಗುಣಮಟಕಲ್ಲಲ್ಲಿ.

೧೩

ಮೂರುಸಾವಿರ ಗುರುಪಾದ ಸ್ವಾಮಿಗಳವರಿಗೆ ಶಿಖಾಪಟ್ಟವು ಆಯಿತು. ಇವರ ತೋರ ಗದ್ದಿಗೆ ಚಿನ್ಮೂಲಾದ್ರಿಯಲ್ಲಿ ( ಚಿತ್ರಕಲದುರ್ಗ ) ಬೃಹನ್ಮಠದಲ್ಲಿ ಇರುತ್ತದೆ.

೧೪

ಮೂರುಸಾವಿರ ಸಿದ್ಧಲಿಂಗ ಸ್ವಾಮಿಯವರಿಗೆ ಶಿಖಾಪಟ್ಟವು ಆಯಿತು. ಇವರ ತೋರ ಗದ್ದಿಗೆ ಮಾಗಡಿಯಲ್ಲಿ.

೧೫

ಒಡ್ಡೊತ್ತಿನ ಚೆನವೀರ ಸ್ವಾಮಿಯವರಿಗೆ ಶಿಖಾಪಟ್ಟವು. ಇವರ ತೋರ ಗದ್ದಿಗೆ ತಿಳುವಳ್ಳಿಯಲ್ಲಿ.

೧೬

ವ್ಯಾಕರಣ ಸಿದ್ಧಲಿಂಗ ಸ್ವಾಮಿಯವರಿಗೆ ಶಿಖಾಪಟ್ಟವು. ಇವರ ತೋರ ಗದ್ದಿಗೆ ವಾಗಡಿಯಲ್ಲಿ.

೧೭

ಸೈಘಂಟನ ಸಿದ್ಧಬಸವ ಸ್ವಾಮಿಯವರಿಗೆ ಶಿಖಾಪಟ್ಟವು. ಇವರ ತೋರ ಗದ್ದಿಗೆ ಹಾವೇರಿಯಲ್ಲಿ.

೧೮

ಸಣ್ಣ ಬರಹದ ರಾಚೋಟಿ ಸ್ವಾಮಿಯವರಿಗೆ ಶಿಖಾಪಟ್ಟವು. ಇವರ ತೋರ ಗದ್ದಿಗೆ ಚಿನ್ಮೂಲಾದ್ರಿಯಲ್ಲಿ.

೧೯

ಸಾವಳಿಗೆಯ ಗುರುಶಾಂತ ಸ್ವಾಮಿಗಳವರಿಗೆ ಶಿಖಾಪಟ್ಟವು. ಇವರ ತೋರ ಗದ್ದಿಗೆ ಚಿನ್ಮೂಲಾದ್ರಿಯಲ್ಲಿ.

೨೦

ಸಣ್ಣ ಪಾದ ಚೆನ್ನವೀರ ಸ್ವಾಮಿಗಳಿಗೆ ಶಿಖಾಪಟ್ಟವು. ಇವರ ತೋರ ಗದ್ದಿಗೆ ಚಿತ್ರದುರ್ಗದ ಬೃಹನ್ಮಠದಲ್ಲಿ.

೨೧

ಕಲಿ ವರ್ಷ ೪೯೬೩, ಶಾಲಿವಾಹನ ಶಕ ೧೭೮೪, ದುಂದುಭಿನಾಮ ಸಂವತ್ಸರ, ಫಾಲ್ಗುಣ ಶುದ್ಧ ೫, ಭಾನುವಾರದ ದಿವಸ ಮಹಾಲಿಂಗ ಸ್ವಾಮಿಯವರಿಗೆ ಶಿಖಾಪಟ್ಟವು ಆಯಿತು. ಇವರ ತೋರ ಗದ್ದಿಗೆ ಶಿರಸಂಗಿಯಲ್ಲಿ.

೨೨

ರುದ್ರ ಸ್ವಾಮಿಗಳವರಿಗೆ ಶಿಖಾಪಟ್ಟವು ಆಯಿತು. ಇವರ ತೋರ ಗದ್ದಿಗೆ ಚಿನ್ಮೂಲಾದ್ರಿಯ ಬೃಹನ್ಮಠದಲ್ಲಿ.

೨೩

ಮುಪ್ಪಿನ ಸ್ವಾಮಿಗಳವರಿಗೆ ಶಿಖಾಪಟ್ಟವು ಆಯಿತು.

ಈ ಮೇಲ್ಕಾಣಿಸಿದ ವಿಷಯುಗಳನ್ನು ಚಿತ್ರಕಲದುರ್ಗ ಶೂನ್ಯಸಿಂಹಾಸನಾಧೀಶ ಜಗದ್ಗುರು ಮುರಿಗ್ಯಾರಾಜೇಂದ್ರ ಮಹಾಸ್ವಾಮಿಗಳ ಮಠದಲ್ಲಿದ್ದ ದಾಖಲೆಯ ಮೇಲಿಂದ ಸಂಕ್ಷಿಪ್ತವಾಗಿ ತೆಗೆದು ಕೊಂಡು ಸೂಚಿಸಿರುವೆವು.

ಈ ಪ್ರಕಾರ ಈ ಹೊತ್ತಿನ ವರೆಗೆ ವಂಶವು ನಡೆಯುತ್ತಾ ಬಂತು. ಪ್ರತಿಯೊಬ್ಬ ಸ್ವಾಮಿಗಳ ಚರಿತ್ರವನ್ನು ಎಷ್ಟು ಸಂಕ್ಷೇಪದಿಂದ ಕೊಟ್ಟರೂ ವಿಸ್ತಾರವು ಬಹಳ ಆಗುತ್ತದೆ ಎಂದು ಅವರವರ ಹೆಸರು, ಮೂಲಸ್ಥಳ, ತೋರ ಗದ್ದಿಗೆ ಇರು

ವ ಸ್ಥಳ ಇಷ್ಟನ್ನು ಮಾತ್ರ ಇಲ್ಲಿ ಹೇಳಿದೆ. ಮತ್ತೊಂದು ಕಾಲದಲ್ಲಿ ವಿಸ್ತಾ ರವಾಗಿ ಲಿಖಿಸುವದಿರುತ್ತದೆ.

---

॥ ಶ್ರೀರಸ್ತು ॥

# ॥ ನಿರಾಭಾರಿಲಕ್ಷಣಾನಿ. ॥

## ಸೂಕ್ಷ್ಮಾಗಮೇ ಪಟಲ ೧೨

ನಿರಾಭಾರಿಚರಾಣಾಂ ಚ ಷಡ್ಗುಣಂ ಭೂಷಣಂ ಸ್ಮೃತಂ । ಏಕನ್ಯೂನೋ ಭವತಿ ವಾ ಸ ದಾರೀತಿ ನಿಗದ್ಯತೇ ॥೧॥ ವೈರಾಗ್ಯಂ ಜ್ಞಾನಸಂಪತ್ತಿ ಬ್ರಹ್ಮಚರ್ಯಂ ತಪೋಜ್ವಲಂ । ಕಾರುಣ್ಯಂ ಚ ಸದಾಚಾರಮೇತತ್ ಷಟ್ ಸಂಪ್ರಕೀರ್ತಿತಂ ॥೨॥ ಷಟ್‌ಸಂಸ್ಕಾರಗುಣಂ ತ್ಯಕ್ತ್ವಾ ಲಿಂಗಧಾರೀ ಚರೋ ಯದಿ । ಸ ಚರೋ ನ ಸದಾಚಾರೀ ಸೋಪಿ ವ್ಯಕ್ತೋ ನಿಶಾಚರಃ ॥ ೩ ॥ ಲಿಂಗಿಬ್ರಾಹ್ಮಣಸಂಭೂತೋ ಲಿಂಗಧಾರೀ ಕ್ರಿಯಾನ್ವಿತಃ । ಕಾಮಿನೀರಹಿತೋ ಭೂತ್ವಾ ನಿರಾಭಾರಿಪದಂ ವ್ರಜೇತ್ ॥ ೪॥ ಯೋ ವೀರಮಾರ್ಗಗಾಮೀ ಚ ಚರಧಾರೀ ಭವೇತ್ ಸದಾ । ಅಚರಂಶ್ಚಾನ್ನಭೋಕ್ತಾ ಚ ಸ ಕಥಂ ವೀರಶೈವವಾನ್ ॥ ೫ ॥ ಸರ್ವೇ ಭಕ್ತಾಃ ಸದಾಚಾರದಕ್ಷವೃತ್ತಿಪ್ರಪೂಜಿತಾಃ । ಭವಂತಿ ಯದಿ ದೇವೇಶಿ ವ ಜಾಯಂತೇ ಹಿ

---

# ನಿರಾಭಾರಿಯ ಲಕ್ಷಣವು.

## ಸೂಕ್ಷ್ಮಾಗಮ ಪಟಲ ೧೨

॥ ೧ ॥ ನಿರಾಭಾರಿಗಳಾದ ಚರಮೂರ್ತಿಗಳಿಗೆ ಷಡ್ಗುಣಗಳು ಭೂಷಣವಾಗಿರುತ್ತವೆ. ಅವುಗಳಲ್ಲಿ ಒಂದು ಕಡಿಮೆ ಆದರೆ ಅವರು ಸಂಸಾರಿಗಳೆಂದು ಅನಿಸಿ ಕೊಳ್ಳುತ್ತಾರೆ. ॥ ೨ ॥ ೧ ವೈರಾಗ್ಯವು ೨ ಜ್ಞಾನವು ೩ ಬ್ರಹ್ಮಚರ್ಯವು ೪ ತಪಸ್ಸು ೫ ಕಾರುಣ್ಯವು ೬ ಸದಾಚಾರವು ಇವು ಷಡ್ಗುಣಗಳೆಂದು ಹೇಳಲ್ಪಡುತ್ತವೆ. ॥ ೩ ॥ ಈ ಆರು ಸಂಸ್ಕಾರಗುಣಗಳನ್ನು ಬಿಟ್ಟು ಯಾವನಾದರೂ ಲಿಂಗಧಾರಿಯು ಚರನಾದರೆ ಆ ಚರನು ಸದಾಚಾರಿ ಅಲ್ಲವು; ಆತನು ಪ್ರತ್ಯಕ್ಷ ರಾಕ್ಷಸನೆಂದು ತಿಳಿಯ ಬೇಕು. ॥ ೪ ॥ ಲಿಂಗಿಬ್ರಾಹ್ಮಣರ ಹೊಟ್ಟೆಯಲ್ಲಿ ಹುಟ್ಟಿ ಲಿಂಗಧಾರಣ ಮಾಡಿ ಶಾಸ್ತ್ರೋಕ್ತವಾದ ಕರ್ಮಗಳನ್ನು ಮಾಡುತ್ತಾ ಮಡತೆ ಇಲ್ಲದೆ ಇರುವವನು ನಿರಾಭಾರಿ ಎಂಬ ಪದವಿಯನ್ನು ಪಡೆಯುತ್ತಾನೆ.॥೫॥ ಯಾವನಾದರೂ ವೀರಶೈವ ಮಾರ್ಗದಿಂದ ನಡೆದಾಗ್ಯೂ ಚರಲಿಂಗವನ್ನು ಧರಿಸಿದ್ದಾಗ್ಯೂ ಸಂಚಾರ ಮಾಡದೆ ಅನ್ನಭೋಜನ ಮಾಡಿದರೆ ಆವನು ವೀರಶೈವನು ಹ್ಯಾಗೆ ಆದಾನು? ॥ ೬ ॥ ದೇವತೆಗಳಲ್ಲಿ ಶ್ರೇಷ್ಠಳಾದ ಪಾರ್ವತಿಯೇ, ಎಲ್ಲಾ ಭಕ್ತರು ಸದಾಚಾರದಲ್ಲಿ ಆಸಕ್ತಿಯುಳ್ಳ ನಡತೆಯಿಂದ ಕೂಡಿದವರಾ

ಕಿಂ ಚರಾ: ॥ ೬ ॥ ಚರಾದ್ ಜ್ಞಾನಪರಾ ಜಾತಾಶ್ಯಾಪದಾನದಯಾಪ
ರಾ: । ಸದ್ಭಕ್ತಾ ನ ಚ ಜಾಯಂತೇ ವೀರಮಾರ್ಗೇಷು ಕೋವಿದಾ: ॥೭॥
ಆಚಾರಪುರುಷೋ ವೀರ ಆಚಾರೀ ವೀರಶೈವವಾನ್ । ಅನಾಚಾರೀ ಚ
ರೇಂದ್ರೋಪಿ ದೂಷಣೀಯೋ ಗಣೇಶ್ವರೈ: ॥ ೮ ॥ ಅನಾಚಾರಪರತ್ವೇನ
ಮಹಾಪಾತಕಸಂಭವ: । ಮಹಾಪಾಪೋದ್ಭವಾದ್ದೇವಿ ಯಾತನಾಭಾಜ
ನೋ ಭವೇತ್ ॥ ೯ ॥ ಅಜ್ಞಾನಾದಪಿ ಕ್ರೋಧಾದ್ವಾ ಮೋಹನಾದ್ವಾಪಿ
ಮಾನವ: । ಬಹುಪಾಪಾನಿ ಸಂಕುರ್ವನ್ ಯಾತನಾಭಾಜನೋ ಭವೇ
ತ್ ॥ ೧೦ ॥ ಭಕ್ತಾನಾಂ ವೀರಶೈವಾನಾಂ ನಿರಾಭಾರಮತಾಂ ಸದಾ । ಕಾ
ಷಾಯುವಸ್ತ್ರಮಿಾಶಾನಿ ಸ್ವೇಷ್ಟಲಿಂಗಸ್ಯ ಭೂಷಣಂ ॥ ೧೧ ॥ ಪಾಂಡುರಂ
ಲಿಂಗಸೂತ್ರಂ ಚ ಪಾಂಡುರಂ ಶಾಂಭವಾಂಬರಂ । ಪಾಂಡುರಂ ವಸನಂ
ದೂಷ್ಯಂ ಮದ್ಧ್ಯಾನರತಭಾವಿನಾಂ ॥೧೨॥ ನಿರಾಭಾರೀ ವಿರಕ್ತಶ್ಚ ಲೋ
ಕಪೂಜ್ಯೋ ಮಹೇಶ್ವರಿ । ವಿನಾ ಕಾಷಾಯುವಸನಂ ನ ವಹೇಚ್ಛ್ವೇತಮಂ
ಬರಂ ॥ ೧೩ ॥

---

ದರೆ ಅವರೊಳಗೆ ಚರಮೂರ್ತಿಗಳು ಹುಟ್ಟಲಿಕ್ಕಿಲ್ಲವೇ? ॥ ೭ ॥ ಆ ಚರಮೂ
ರ್ತಿಗಳಿಂದ ಜ್ಞಾನವನ್ನು ಪಡೆದು, ಶಾಪ ಕೊಡಲಿಕ್ಕೂ ದಾನ ಮಾಡಲಿ
ಕ್ಕೂ ದಯೆ ತೋರಿಸಲಿಕ್ಕೂ ಸಾಮರ್ಥ್ಯ ಉಳ್ಳಂಥ ಜ್ಞಾನಿಗಳಾದ ಒಳ್ಳೇ ಭ
ಕ್ತರು ಈ ವೀರಮಾರ್ಗದಲ್ಲಿ ಹುಟ್ಟಲಿಕ್ಕಿಲ್ಲವೇ? ॥ ೮ ॥ ಸದಾಚಾರ ಉಳ್ಳ
ಪುರುಷನೇ ವೀರನು; ಆತನೇ ವೀರಶೈವ ಉಳ್ಳವನು. ಚರಶ್ರೇಷ್ಠನಾದಾಗ್ಯೂ
ಅನಾಚಾರಿ ಆಗಿದ್ದರೆ ಆತನನ್ನು ಗಣಶ್ರೇಷ್ಠರು ದೂಷಿಸ ತಕ್ಕದ್ದು. ॥ ೯ ॥ ಅ
ನಾಚಾರದಲ್ಲಿ ಆಸಕ್ತಿಯನ್ನು ಇಡುವದರಿಂದ ದೊಡ್ಡ ಪಾಪಗಳು ಸಂಭವಿಸು
ತ್ತವೆ. ದೊಡ್ಡ ಪಾಪಗಳು ಆಗುವದರಿಂದ ಆತನು ಯಾತನೆಗೆ ಗುರಿಯಾಗು
ತ್ತಾನೆ. ॥ ೧೦ ॥ ಅಜ್ಞಾನದಿಂದಾಗಲಿ ಸಿಟ್ಟಿನಿಂದಾಗಲಿ ಭ್ರಾಂತಿಯಿಂದಾಗಲಿ
ಮನುಷ್ಯನು ಬಹಳ ಪಾಪಗಳನ್ನು ಮಾಡಿ ಯಾತನೆಗೆ ಗುರಿಯಾಗುತ್ತಾನೆ.
॥ ೧೧ ॥ ನಿರಾಭಾರಿಗಳೂ ವೀರಶೈವ ಭಕ್ತರೂ ತಮ್ಮ ಇಷ್ಟಲಿಂಗಕ್ಕೆ ಕಾವಿ
ಯ ವಸ್ತ್ರವನ್ನು ಭೂಷಣವಾಗಿ ಮಾಡಿ ಕೊಳ್ಳ ಬೇಕು. ॥ ೧೨ ॥ ಬಿಳಿಯ ಶಿವ
ದಾರವೂ, ಬಿಳಿಯ ಲಿಂಗವಸ್ತ್ರವೂ, ಬಿಳಿಯ ಬಣ್ಣದ ಉಟ್ಟುಕೊಳ್ಳುವ ಹೊ
ದ್ದುಕೊಳ್ಳುವ ವಸ್ತ್ರಗಳೂ, ನನ್ನ ಧ್ಯಾನದಲ್ಲಿ ನಿರತರಾದಂಥ ಭಾವಿಕರಿಗೆ
ದೋಷಾಸ್ಪದವೆಂದು ತಿಳಿಯ ತಕ್ಕದ್ದು. ॥ ೧೩ ॥ ಪಾರ್ವತಿಯೇ, ಲೋಕ
ಕ್ಕೆ ಪೂಜ್ಯನೂ ವಿರಕ್ತನೂ ಆದ ನಿರಾಭಾರಿಯು ಕಾವಿಯ ವಸ್ತ್ರವನ್ನು ಬಿ
ಟ್ಟು. ಬಿಳಿಯ ವಸ್ತ್ರವನ್ನು ಧರಿಸ ಬಾರದು.

ಕ್ರಿಮಿಕೀಟಪತಂಗೇಭ್ಯಃ ಪಶವಃ ಪ್ರಜ್ಞಯಾಧಿಕಾಃ । ಪಶುಭ್ಯೋಽಪಿ ನರಾಃ ಶ್ರೇಷ್ಠಾಸ್ತೇಷು ಶ್ರೇಷ್ಠಾ ದ್ವಿಜಾತಯಃ ॥ ೧೪ ॥ ದ್ವಿಜಾತಿಷ್ವಧಿಕಾ ವಿಪ್ರಾ ವಿಪ್ರೇಷು ಕ್ರತುಬುದ್ಧಯಃ । ಕ್ರತುಬುದ್ಧಿಷು ಕರ್ತಾರಸ್ತೇಭ್ಯಃ ಸನ್ಯಾಸಿನೋಽಧಿಕಾಃ ॥ ೧೫ ॥ ತೇಭ್ಯೋಽ ವಿಜ್ಞಾನಿನಃ ಶ್ರೇಷ್ಠಾಸ್ತೇಷು ಶಂಕರಪೂಜಕಾಃ । ತೇಷು ಶ್ರೇಷ್ಠಾ ಮಹಾಭಾಗ ಮಮಲಿಂಗಾಂಗಸಂಗಿನಃ ॥ ೧೬ ॥ ಲಿಂಗಾಂಗಸಂಗಿಷ್ವಧಿಕಃ ಷಟ್‌ಸ್ಥಲಜ್ಞಾನವಾನ್ ಪುಮಾನ್ । ತಸ್ಮಾದಪ್ಯಧಿಕೋಽ ನಾಸ್ತಿ ತ್ರಿಷು ಲೋಕೇಷು ಸರ್ವದಾ ॥ ೧೭ ॥ ಸ ವಂದ್ಯಃ ಸರ್ವದಾ ಪೂಜ್ಯಃ ಸಂಸಾರವಿಜಿಗೀಷುಭಿಃ । ಬಹುನೋಕ್ತೇನ ಕಿಂ ವತ್ಸ ಸ ಏವಾಯಂ ನ ಸಂಶಯಃ ॥ ೧೮ ॥

—o—

ಇತ್ಯೇಕವಚನಂ ಪೂರ್ವಂ ಸುಯಶಾವಲ್ಲಭೋ ಮುದಾ । ಕುಮಾರಾಯ ಬಭಾಣಾದ್ಯ ಬೋಧಿತಂ ಚೇಹ ಶಾಂಕರಿ ॥ ೧೯ ॥ ಯಸ್ಮಿನ್ ಸ್ಥಲೇ

---

॥ ೧೪ ॥ ಹುಳು ಹುಪ್ಪಡಿಗಳಿಗಿಂತ ಪಶುಗಳು ಜ್ಞಾನದಲ್ಲಿ ಹೆಚ್ಚಿನವು; ಪಶುಗಳಿಗಿಂತ ಮನುಷ್ಯರು ಹೆಚ್ಚಿನವರು; ಅವರಲ್ಲಿ ದ್ವಿಜರು ( ಬ್ರಾಹ್ಮಣ ಕ್ಷತ್ರಿಯ ವೈಶ್ಯರು ) ಶ್ರೇಷ್ಠರು; ॥೧೫॥ ದ್ವಿಜರಲ್ಲಿ ಬ್ರಾಹ್ಮಣರು ಶ್ರೇಷ್ಠರು; ಅವರಲ್ಲಿ ಯಜ್ಞಗಳನ್ನು ಮಾಡುವ ಅಪೇಕ್ಷೆ ಉಳ್ಳವರು ಶ್ರೇಷ್ಠರು; ಅವರಲ್ಲಿ ಯಜ್ಞಗಳನ್ನು ನಿಜವಾಗಿ ಮಾಡುವವರು; ಅವರಿಗಿಂತ ಸನ್ಯಾಸಿಗಳು ಶ್ರೇಷ್ಠರು; ॥ ೧೬ ॥ ಅವರಿಗಿಂತ ವಿಜ್ಞಾನ ಉಳ್ಳವರು; ಅವರಲ್ಲಿ ಶಂಕರನನ್ನು ಪೂಜೆ ಮಾಡುವವರು; ಎಲೈ ಭಾಗ್ಯಶಾಲಿಯೇ, ಆ ಶಂಕರನನ್ನು ಪೂಜೆ ಮಾಡುವವರೊಳಗಾದರೂ ನನ್ನ ಲಿಂಗವನ್ನು ಮೈಮೇಲೆ ಧರಿಸಿದವರು ಶ್ರೇಷ್ಠರು; ॥ ೧೭ ॥ ಲಿಂಗಧಾರಿಗಳಲ್ಲಿಯೂ ಆರು ಸ್ಥಲಗಳನನ್ನು ಬಲ್ಲವನು ಶ್ರೇಷ್ಠನು; ಆತನಿಗಿಂತ ಶ್ರೇಷ್ಠನು ಮೂರುಲೋಕಗಳಲ್ಲಿ ಎಂದೂ ಇರಲಾರನು. ॥ ೧೮ ॥ ಈ ಸಂಸಾರವನ್ನು ಗೆಲ್ಲಬೇಕೆಂಬ ಅಪೇಕ್ಷೆ ಉಳ್ಳವರು ಆತನನ್ನು ಯಾವಾಗಲೂ ವಂದಿಸ ಬೇಕು ಹಾಗೂ ಪೂಜಿಸ ಬೇಕು. ಬಹಳ ಹೇಳುವದರಿಂದ ಏನು ಪ್ರಯೋಜನ? ಎಲೈ ಮಗುವೇ, ನಿಸ್ಸಂಶಯವಾಗಿ ಅತನೆ ಈತನು.

—o—

॥ ೧೯ ॥ ಈ ಪ್ರಕಾರ ಸುಯಶಾವಲ್ಲಭನು ಹಿಂದಕ್ಕೆ ಕುಮಾರನಿಗೆ ಸಂತೋಷದಿಂದ ಒಂದು ಮಾತನ್ನು ಆಡಿದನು; ಅದನ್ನು ಈಗ ಇಲ್ಲಿ, ಪಾರ್ವತಿಯೇ ನಿನಗೆ ಹೇಳಿದೆನು. ॥ ೨೦ ॥ ಯಾವ ಸ್ಥಲದಲ್ಲಿ ವೀರಶೈವನು ಪ್ರತಿಕ್ಷ

ವೀರಶೈವೋ ವಿರಾಜತಿ ಕ್ಷಣಂ ಕ್ಷಣಂ । ತತ್ ಸ್ಥಲಂ ಲಿಂಗಸದನಮಿತಿ ಭಾವಯ ನಿಶ್ಚಯಂ ॥೨೦॥ ವೀರಶೈವೋದರಾಜ್ಜಾತೋ ನಿರಾಭಾರೀ ಮಹೇಶ್ವರ: । ನಿರಾಭಾರಿಪಿತಾ ದೇವಿ ವೀರಶೈವೋ ಗಣೇಶ್ವರ: ॥೨೧॥ ವೀರಶೈವ: ಪಿತಾರೂಪೀ ಜನನೀರೂಪ ಏವ ಹಿ । ಗುರುರೂಪೋ ವೀರಶೈವೋ ಲಿಂಗರೂಪೋ ನಿರಂಜನ: ॥೨೨॥ ನಿರಾಭಾರೀ ದೇಶಿಕೇಂದ್ರೋ ನಿಗಮಾಗಮಪಾಠಕ: । ಪಶ್ಚಿಮಸ್ಥಾನಗಲಿತೋ ಭಕ್ತಿಕಾರಣವೈಭವಾತ್ ೨೩ ॥ ತತ್ಪಾದಪದ್ಮಗಲಿತಾ ಜಾಹ್ನವೀ ಲೋಕಪಾವನೀ । ಇಯಂ ಗಂಗಾ ವೀರಶೈವೇ ಬಭೂವ ಗಲಮಾಲಿಕಾ ॥ ೨೪ ॥ ಕ್ರಿಯಾಹೀನ: ಸಂಚರಾಮಿ ಲಿಂಗಹೀನಸ್ತಥೈವ ಚ । ಆಕಾರಹೀನತೋ ದೇವಿ ಕೇವಲಂ ಜ್ಞಾನರೂಪತ: ॥೨೫॥ ದೇಹಧಾರೀ ಲಿಂಗಧಾರೀ ಕ್ರಿಯಾಜ್ಞಾನಾತ್ಮಕ: ಸದಾ । ಭೂತ್ವಾ ಸಂಚರತೇ ದೇವಿ ಮದ್ಭಕ್ತೋ ವೀರಶೈವವಾನ್ ॥ ೨೬ ॥ ಸರ್ವೇಷಾಮಧಿಕಶ್ಚಾಹಂ ಮಮೇಶಾ ವೀರಶೈವಿನ: । ತೇಷಾಂ ನಾಸ್ತ್ಯಧಿಕೋ ದೇವಿ ಸತ್ಯಂ ಸ

ಣದಲ್ಲಿಯೂ ವಿರಾಜಿಸುತ್ತಾನೋ ಆ ಸ್ಥಲವು ಲಿಂಗದ ಮನೆ ಎಂದು ನಿಶ್ಚಯವಾಗಿ ತಿಳಿದುಕೋ. ॥ ೨೧ ॥ ವೀರಶೈವನ ಹೊಟ್ಟೆಯಲ್ಲಿ ಹುಟ್ಟಿದಂಥ ನಿರಾಭಾರಿಯು ಮಹೇಶ್ವರನು; ವೀರಶೈವನಾದ ಆತನ ತಂದೆಯು ಗಣೇಶ್ವರನು. ॥ ೨೨ ॥ ವೀರಶೈವವು ತಂದೆಯ ರೂಪದಿಂದಲೂ ತಾಯಿಯ ರೂಪದಿಂದಲೂ ಗುರುವಿನ ರೂಪದಿಂದಲೂ ಇರುತ್ತದೆ; ನಿರಂಜನನು ಲಿಂಗರೂಪದಿಂದ ಇರುತ್ತಾನೆ. ॥ ೨೩ ॥ ಗುರುಶ್ರೇಷ್ಠನೂ, ನಿಗಮಗಳನ್ನೂ ಆಗಮಗಳನ್ನೂ ಕಲಿಸುವನೂ, ಆದ ನಿರಾಭಾರಿಯು ಭಕ್ತಿ ಕಾರಣವೈಭವದ ಮೂಲಕವಾಗಿ ಪಶ್ಚಿಮಸ್ಥಾನಗಲಿತನಾಗಿರುತ್ತಾನೆ. ॥ ೨೪ ॥ ಲೋಕಗಳನ್ನು ಪಾವನ ಮಾಡುವ ಭಾಗೀರಥಿಯು ಆತನ ಪಾದಕಮಲದಿಂದಲೇ ಹುಟ್ಟಿದಳು; ಈ ಗಂಗೆಯು ವೀರಶೈವನಿಗೆ ಕೊರಳೊಳಗಿನ ಮಾಲೆ ಆದಳು. ॥೨೫॥ ದೇವೀ, ನಾನು ಕ್ರಿಯಾಹೀನನಾಗಿಯೂ, ಅದೇ ಪ್ರಕಾರ ಲಿಂಗಹೀನನಾಗಿಯೂ, ಆಕಾರವಿಲ್ಲದವನಾಗಿಯೂ ಕೇವಲ ಜ್ಞಾನರೂಪದಿಂದ ತಿರುಗಾಡುತ್ತೇನೆ. ॥ ೨೬ ॥ ದೇವಿಯೇ, ನನ್ನ ಭಕ್ತನಾದ ವೀರಶೈವ ಉಳ್ಳವರು ದೇಹಧಾರಿಯಾಗಿಯೂ, ಲಿಂಗಧಾರಿಯಾಗಿಯೂ, ಕ್ರಿಯಾಜ್ಞಾನಗಳಿಂದ ಕೂಡಿದವನಾಗಿಯೂ, ಸಂಚಾರ ಮಾಡುತ್ತಾನೆ. ॥ ೨೭ ॥ ಎಲ್ಲರಿಗೂ ಹೆಚ್ಚಿನವನು ನಾನು; ವೀರಶೈವ ಉಳ್ಳವರು ನನಗೆ ಒಡೆಯರಾಗಿದ್ದಾರೆ. ದೇವಿಯೇ, ಅವರಿಗಿಂತ ಹೆಚ್ಚಿನವನು ಯಾವನೂ ಇಲ್ಲ; ಈ ಮಾತು ಸತ್ಯ, ಸತ್ಯ;

ತ್ಯಂ ನ ಸಂಶಯಃ ॥ ೨೭ ॥ ಆಚಾರಹೀನತಾ ಯಸ್ಮಿನ್ ನಿರಾಭಾರಿಣಿ ವ ರ್ತತೇ । ಯದಿ ಸ ಚಾಧಮಃ ಪ್ರೋಕ್ತೋ ವಚನೇನ ಮಮ ಪ್ರಿಯೇ ॥೨೮॥ಸರ್ವಧರ್ಮಾಣಾಯ ಗಾಂಭೀರ್ಯಂ ವರ್ತತೇ ಶುದ್ಧವರ್ತನಾತ್ । ಅವ ರ್ತನಾತ್ಸರ್ವಧರ್ಮಾಂ ವಿನಶ್ಯತಿ ವರಾನನೇ ॥ ೨೯ ॥

ಶಂಕರಸಂಹಿತಾ ಅ. ೮೩

ಧಾರಯೇತ್ಸಮತಾಂ ಕಂಥಾಂ ಕ್ಷಮಾಖ್ಯಾಂ ಭಸ್ಮಘುಂಟಿಕಾಂ । ದಯಾ ಕಮಂಡಲುಂ ಸತ್ಯಜ್ಞಾನದಂಡಂ ಮನೋಹರಂ ॥ ೫೧ ॥ ವೈರಾಗ್ಯಭಿಕ್ಷಾ ಪಾತ್ರಂ ಚ ಭಕ್ತಿಭಿಕ್ಷಾಂ ಚ ಯಾಚಯೇತ್ । ಲಿಂಗಾಂಗಸಂಗಿನಃ ಶುದ್ಧಾ ನ್ ಸದಾಚಾರಾನ್ವಿತಾನ್ನರಾನ್ ॥೫೨॥ ಏವಂ ವಿಚರತಸ್ತಸ್ಯ ಭವಂತ್ಯೇತೇ ಪರಿಗ್ರಹಾಃ । ವಿದ್ಯಾ ಭಾರ್ಯಾ ಸುತಸ್ತೋಷಃ ಕ್ಷಮಾ ಹಿ ಪರಿಚಾರಿ ಕಾ ॥ ೫೩ ॥ ಮಾತಾ ಭಕ್ತಿಃ ಪಿತಾಚಾರಸ್ಸತ್ಯಂ ನಪ್ತಾ ಶಮಃ ಸಖಾ । ವೈ ರಾಗ್ಯಂ ಸುಹೃದಾಚಾರ್ಯೋ ದಮಃ ಶ್ರದ್ಧಾ ಸ್ವಸಾ ಮತಾ ॥೫೪ ॥ ದಾ

---

ಇದರಲ್ಲಿ ಏನೂ ಸಂಶಯವಿಲ್ಲ. ॥ ೨೭ ॥ ಯಾವನಾದರೂ ನಿರಾಭಾರಿಯ ಲ್ಲಿ ಅನಾಚಾರವು ಇದ್ದದ್ದಾದರೆ, ಪ್ರಿಯಳೇ, ಆತನಿಗೆ ಅಧಮನೆನ್ನಬೇಕು ಎಂದು ನನ್ನ ಆಜ್ಞೆ ಅದೆ. ॥೨೯ ॥ ಶುದ್ಧವಾದ ವರ್ತನದಿಂದ ಎಲ್ಲಾ ಧ ರ್ಮಕ್ಕೂ ಗಾಂಭೀರ್ಯವು ಉಂಟಾಗುತ್ತದೆ; ಕೆಟ್ಟ ನಡತೆಯಿಂದ ಎಲ್ಲ ಧ ರ್ಮವೂ ನಾಶ ಹೊಂದುತ್ತದೆ.

ಶಂಕರಸಂಹಿತೆ ಅಧ್ಯಾಯ ೮೩

॥ ೫೧ ॥ ಎಲ್ಲರಲ್ಲಿಯೂ ಸಮಾನವಾದ ಬುದ್ಧಿ ಎಂಬ ಕವದಿಯನ್ನೂ, ಕ್ಷಮೆ ಎಂಬ ವಿಭೂತಿಯ ಉಂಡೆಯನ್ನೂ, ದಯೆ ಎಂಬ ಕಮಂಡಲುವ ನ್ನೂ, ಸತ್ಯಜ್ಞಾನವೆಂಬ ಮನೋಹರವಾದ ದಂಡವನ್ನೂ ಧರಿಸಬೇಕು. ॥ ೫೨ ॥ ವೈರಾಗ್ಯವೆಂಬ ಭಿಕ್ಷಾಪಾತ್ರೆಯನ್ನು ಹಿಡಿದು, ಶುದ್ಧರೂ ಸದಾರಿ ಗಳೂ, ಆದ ಲಿಂಗಧಾರಿಗಳಲ್ಲಿ ಭಕ್ತಿಯ ಭಿಕ್ಷೆಯನ್ನು ಬೇಡ ಬೇಕು. ॥೫೩॥ ಈ ಪ್ರಕಾರ ಸಂಚಾರ ಮಾಡುವಂಥ ಆತನಿಗೆ ಮುಂದೆ ಹೇಳಿದ ಕುಟುಂ ಬವು ಒದಗುತ್ತದೆಃ— ವಿದ್ಯೆ ಹೆಂಡತಿ; ಸಂತೋಷವು ಮಗನು; ಕ್ಷಮೆ ದಾ ಸಿಯು; ॥ ೫೪ ॥ ಭಕ್ತಿ ತಾಯಿಯು; ಸದಾಚಾರವು ತಂದೆ; ಸತ್ಯವು ಮು ಮ್ಮಗನು; ಶಮವು ಗೆಳೆಯನು; ವೈರಾಗ್ಯವು ಒಳ್ಳೇ ಮನಸುಳ್ಳ ಮಿತ್ರನು; ದಮವು ಆಚಾರ್ಯನು; ಶ್ರದ್ಧೆ ( ವಿಶ್ವಾಸವು ) ತಂಗಿ; ॥ ೫೫ ॥ ಅಹಿಂಸೆ

ಸೀತ್ವಹಿಂಸಾ ದಾಸ: ಸ್ಯಾದಸ್ತೇಯಂ ಪರಿಕೀರ್ತಿತ: । ಮೈತ್ರ್ಯಾದ್ಯಾಸ್ತನ ಯಾ: ಪ್ರೋಕ್ತಾ ಧರ್ಮೋಽಸೌ ವಾಹನಂ ಮತಂ ॥೫೫॥ ಜ್ಞಾನಂ ದೇಹ ಸ್ತಥಾ ಕ್ಷೇತ್ರಂ ವಿಚಾರ: ಸರ್ವಗೋಚರ: । ದೇಶೋ ಮೋಕ್ಷ: ಸುಗಮ್ಯೋ ಯಂ ಪ್ರಾಣಲಿಂಗಾಂಗಸಂಗಿನ: ॥ ೫೬ ॥ ಏತಾನ್ ಪರಿಗ್ರಹಾನ್ ವತ್ಸ ಗೃಹೀತ್ವಾ ಶುದ್ಧಮಾನಸ: । ಪರಿಪೂರ್ಣಶ್ಚಿದಾನಂದಶ್ಚರೇದುರ್ವೀಮಿ ಮಾಂವರ: ॥ ೫೭ ॥

ಅ. ೮೧

ಆತ್ಯಾಶ್ರಮೀ ಪ್ರಾಣಲಿಂಗಸಂಬಂಧೀ ಭಸ್ಮಘುಂಟಿಕಾಮ್ । ಕಂಥಾಂ ಕಮಂಡಲುಂ ಭಿಕ್ಷಾಪಾತ್ರಂ ದಂಡಂ ಚ ಧಾರಯೇತ್ ॥ ೪೮ ॥ ಏತಾ: ಪಂಚ ಮಹಾಮುದ್ರಾ ಯಸ್ಮಿನ್ ಯಸ್ಮಿನ್ ಭವಂತಿ ಹಿ । ತಂ ತಂ ಶರ ಣಮಭ್ಯೇತ್ಯ ಸರ್ವಭಾವೇನ ಪೂಜಯೇತ್ ॥ ೪೯ ॥ ಪಂಚಮುದ್ರಾನ್ವಿ ತೋ ಧರ್ಮೋ ಯಸ್ಮಿನ್ ವತ್ಸ ಪ್ರವರ್ತತೇ । ಸ ವಂದ್ಯ: ಸರ್ವದಾ ಪೂಜ್ಯ: ಪ್ರಾಣಲಿಂಗಸಮನ್ವಿತೈ: ॥ ೫೦ ॥

---

ತೊತ್ತು; ತುಡುಗು ಮಾಡದೆ ಇರುವ ಗುಣವು ಆಳು; ಗೆಳೆತನ ಮೊದಲಾ ದವುಗಳು ಮಕ್ಕಳು; ಧರ್ಮವು ವಾಹನವು; ॥ ೫೬ ॥ ಜ್ಞಾನವು ದೇಹವು; ಎಲ್ಲವನ್ನೂ ತಿಳಿಯುವಂಥ ವಿಚಾರವು ಕ್ಷೇತ್ರವು; ಮೋಕ್ಷವೇ ಸ್ಥಾನವು, ಪ್ರಾಣಲಿಂಗವನ್ನು ಧಾರಣ ಮಾಡಿದವರು ಅಲ್ಲಿ ಸುಲಭವಾಗಿ ಹೋಗ ಬ ಹುದು. ॥ ೫೭ ॥ ಎಲೈ ಮಗುವೇ, ಈ ಪ್ರಕಾರದ ಕುಟುಂಬ ಉಳ್ಳವನಾ ಗಿ, ಶುದ್ಧನೂ, ಪರಿಪೂರ್ಣನೂ, ಜ್ಞಾನಾನಂದನೂ, ಆಗಿ ಈ ಭೂಮಿಯ ಲ್ಲಿ ಸಂಚಾರ ಮಾಡ ಬೇಕು.

ಅಧ್ಯಾಯ ೪೧

॥ ೪೮ ॥ ಎಲ್ಲಾ ಆಶ್ರಮಗಳನ್ನು ಮೀರಿದವನಾದ ಪ್ರಾಣಲಿಂಗಧಾರಿಯು ವಿಭೂತಿಯ ಉಂಡೆಯನ್ನೂ ದಂಡವನ್ನೂ, ಮಹಾಲಿಂಗ ಕಪನಿಯನ್ನೂ, ಕಮಂಡಲುವನ್ನೂ, ಭಿಕ್ಷಾಪಾತ್ರೆಯನ್ನೂ ದಂಡವನ್ನೂ, ಧರಿಸ ಬೇಕು. ॥೪೯॥ ಈ ಐದು ಮುದ್ರೆಗಳು ಯಾವಯಾವನಲ್ಲಿ ಉಂಟೋ ಆಯಾ ಮನುಷ್ಯನಿಗೆ ಶರಣು ಹೋಗಿ ಆತನನ್ನು ಸಂಪೂರ್ಣವಾದ ಭಕ್ತಿಯಿಂದ ಪೂಜಿಸ ಬೇ ಕು. ॥ ೫೦ ॥ ಎಲೈ ಮಗುವೆ, ಈ ಐದು ಮುದ್ರೆಗಳಿಂದ ಕೂಡಿದ ಧರ್ಮ ವು ಯಾವನಲ್ಲಿ ವರ್ತಿಸುವದೋ ಆತನು ಪ್ರಾಣಲಿಂಗಧಾರಿಗಳಿಗೆ ವಂದ್ಯ ನೂ ಪೂಜ್ಯನೂ ಆಗಿರುತ್ತಾನೆ.

## ಸೂಕ್ಷ್ಮಾಗಮೇ ಪಟಲೇ ೭

ನಿರಾಭಾರಮತಂ ವಕ್ಷ್ಯೇ ಸಮಾಹಿತಮನಾ: ಶೃಣು ||೭೫|| ಜಂತೋ: ಪುಣ್ಯಂ ಪಾಪಮಿತಿ ಕರ್ಮ ದ್ವಿವಿಧಮುಚ್ಯತೇ | ನಿವೃತ್ತಕರ್ಮಭಾರತ್ವಾನ್ನಿರಾಭಾರ ಇತಿ ಸ್ಮೃತ: || ೭೬ || ಜಟೀ ಮುಂಡೀ ಶಿಖೀ ವಾಪಿ ಕಾಷಾಯವಸನಾನ್ವಿತ: | ನಿಸ್ಪೃಹೋ ನಿಜಲಿಂಗೈಕ್ಯೋ ಭಿಕ್ಷಾಶೀ ಭಯವರ್ಜಿತ: || ೭೭ || ಮೌನೀ ಭೂತದಯಾಯುಕ್ತೋ ನಿರಾಭಾರ ಇತಿ ಸ್ಮೃತ: | ಮಾಹಾತ್ಮ್ಯಂ ಜಟಿನಾಂ ಯತ್ಸ್ಯಾನ್ಮುಂಡಿನಾಂ ಚ ತದೇವ ಹಿ || ೭೮ || ಕಂಥಾಕಮಂಡಲುಧರೋ ಭೂತಿರುದ್ರಾಕ್ಷಸಂಯುತ: | ದಂಡಕೌಪೀನಧಾರೀ ಚ ನಿರಾಭಾರ ಇತಿ ಸ್ಮೃತ: || ೭೯ || ವನ್ಯೈ: ಪತ್ರೈಶ್ಚ ಪುಷ್ಪೈಶ್ಚ ಫಲೈರ್ಲಿಂಗಂ ಪ್ರಪೂಜಯೇತ್ | ಕಾಮಕ್ರೋಧಾದಿರಹಿತಃ ಶಿವಜ್ಞಾನೀ ಜಿತೇಂದ್ರಿಯಃ || ೮೦ || ಜಂಗಮಸ್ತು ಚರೇದ್ಭಿಕ್ಷಾಂ ಯಾವತ್ಸ್ವೋದರಪೂರಣಮ್ | ಚರೇನ್ಮಾಧುಕರೀಂ ಭಿಕ್ಷಾಂ ಚರಸ್ಥಾನೋ ದಯಾಪರಃ

## ಸೂಕ್ಷ್ಮಾಗಮ ಪಟಲ ೭

|| ೭೫ || ನಿರಾಭಾರಮತವನ್ನು ಹೇಳುತ್ತೇನೆ; ಚಿತ್ತ ಗೊಟ್ಟು ಕೇಳು. || ೭೬ || ಪುಣ್ಯವು ಪಾಪವು ಎಂದು ಪ್ರಾಣಿಗಳ ಕರ್ಮ ಎರಡು ವಿಧವಾಗಿ ಇರುವದು. ಅಂಥಾ ಕರ್ಮದ ಭಾರವು ನಿವೃತ್ತವಾದದ್ದರಿಂದ (ಕಳೆಯಲ್ಪಟ್ಟದ್ದರಿಂದ) ನಿರಾಭಾರವೆಂದು ಹೇಳಲ್ಪಡುತ್ತದೆ. || ೭೭ || ಜಡೆ ಉಳ್ಳವನು ಇಲ್ಲವೆ ತಲೆ ಮುಂಡಿಸಿದವನು ಇಲ್ಲವೆ ಚಂಡಿಕೆ ಬಿಟ್ಟವನು, ಕಾವಿಯ ವಸ್ತ್ರ ಧರಿಸಿದವನು, ನಿಸ್ಪೃಹನು, ನಿಜಲಿಂಗದಲ್ಲಿ ಒಂದು ಗೂಡಿದವನು, ಭಿಕ್ಷಾನ್ನ ಭೋಜನ ಮಾಡುವವನು, ನಿರ್ಭಯನು, || ೭೮ || ಮೌನ ಹಿಡಿದವನು, ಪ್ರಾಣಿಗಳಲ್ಲಿ ದಯೆ ಉಳ್ಳವನು, ನಿರಾಭಾರನೆಂದು ಹೇಳಲ್ಪಡುತ್ತಾನೆ. ಜಡೆ ಬಿಟ್ಟವರ ಮಾಹಾತ್ಮ್ಯವು ಯಾವತರದ್ದೋ ಅದೇ ತರದ ಮಾಹಾತ್ಮ್ಯವು ತಲೆ ಮುಂಡಿಸಿದವರದಾದರೂ ಇರುತ್ತದೆ. || ೭೯ || ನಿರಾಭಾರಿಯು ಮಹಾಲಿಂಗ ಕಪನಿ, ಕಮಂಡಲು, ದಂಡ, ಕೌಪೀನ, ರುದ್ರಾಕ್ಷ, ವಿಭೂತಿಗಳನ್ನು ಧರಿಸಿರ ಬೇಕು. || ೮೦ || ಆತನು ಕಾಮ ಕ್ರೋಧ ಮೊದಲಾದವುಗಳಿಲ್ಲದವನಾಗಿಯೂ, ಜಿತೇಂದ್ರಿಯನಾಗಿಯೂ, ಅಡವಿಯೊಳಗಿನ ಹೂವು ಎಲೆ ಹಣ್ಣುಗಳಿಂದ ಲಿಂಗವನ್ನು ಪೂಜಿಸ ಬೇಕು. || ೮೧ || ಚರಸ್ಥಾನದಲ್ಲಿರುವ ಜಂಗಮನು ದಯೆ ಉಳ್ಳವನಾಗಿ ಇದ್ದು ತನ್ನ ಹೊಟ್ಟೆ ತುಂಬುವ ಮಟ್ಟಿಗೆ ಮಾಧುಕರಿಯ ಭಿಕ್ಷೆಯನ್ನು ಬೇಡ ಬೇಕು. || ೮೨ ||

॥ ೮೧ ॥ ಏಕಾನ್ನಂ ತು ನ ಚಾಶ್ನೀಯಾದ್ದೇವಿ ತದ್ದೋಷಕೃದ್ಯತಃ । ಯ
ಥಾ ಮಧುಕರಃ ಪುಷ್ಪಾನ್ಮಧು ಗೃಹ್ಣಾತಿ ಪಾರ್ವತಿ ॥ ೮೨ ॥ ತಥಾ
ಗೃಹಸ್ಥಾದ್ಭಿಕ್ಷೇತ ಉಪವಾಸಸಮೋವಿಧಿಃ । ಏಕಾನ್ನಂ ವಾಪಿ ಭುಂಜೀ
ಯಾತ್ ಪ್ರಾರ್ಥಿತಂ ಸದ್ಭಿರಾದರಾತ್ ॥ ೮೩ ॥ ಭಕ್ತೈರ್ಗೃಹಸ್ಥೈಃ ಸಂ
ಪೂಜ್ಯಾ ಏತೇ ಮಹೇಶ್ವರಾ ಜನಾಃ । ಏತಾನ್ ವಿನಾ ಯಾತ್ರ ಕೃತಾ ಪೂ
ಜಾ ಸಾ ನಿಷ್ಫಲಾ ಭವೇತ್ ॥ ೮೪ ॥ ನ ವಸ್ತು ಸಂಗ್ರಹಂ ಕುರ್ಯಾದ್ಯತ್ರ
ಕುತ್ರಾಪಿ ಜಂಗಮಃ । ದತ್ತಂ ದದ್ಯಾಚ್ಚ ಭಕ್ತೇಭ್ಯೋ ದರಿದ್ರೇಭ್ಯೋ ದ
ಯಾನ್ವಿತಃ ॥ ೮೫ ॥ ಸುವರ್ಣರತ್ನದಾನಾದಿವಸ್ತುವೃದ್ಧ್ಯುಪಜೀವನಾ
ತ್ । ಅತ್ಯಾಶ್ರಮೀ ಯದಿ ಚರೇತ್ ಸೋಽಯಂ ಪಾತಕಿನಾಂ ವರಃ ॥೮೬॥
ಜಟಾಧಾರೀ ಶಿಖೀ ಮುಂಡೀ ಪಂಚಮುದ್ರಾಸಮನ್ವಿತಃ । ಸ್ತ್ರೀಸಂಗಂ
ಕುರುತೇ ಯಸ್ತು ಸ ಮದ್ದ್ರೋಹೀ ನ ಸಂಶಯಃ ॥ ೮೭ ॥ ಅತಿವ
ರ್ಣಾಶ್ರಮೀ ಮುಂಡೀ ಪ್ರಾಣಲಿಂಗಾಂಗಯೋಗಭಾಕ್ । ನ ಧಾರಯೇ

---

ದೇವೀ, ಆತನು ಒಂದೇ ಮನೆಯ ಅನ್ನವನ್ನು ಉಣ್ಣ ಬಾರದು; ಅದು ದೋ
ಷಕ್ಕೆ ಕಾರಣವಾಗುತ್ತದೆ. ಪಾರ್ವತಿಯೇ, ಗುಂಗೀ ಹುಳುವು ಹ್ಯಾಗೆ ಹೂ
ವುಗಳಿಂದ ಸವಿಯಾದ ರಸವನ್ನು ತೆಗೆದು ಕೊಳ್ಳುತ್ತದೋ ॥ ೮೩ ॥ ಹಾಗೆ
ಆತನು ಗೃಹಸ್ಥರಲ್ಲಿ ಭಿಕ್ಷೆಯನ್ನು ಬೇಡ ಬೇಕು; ಇದು ಉಪವಾಸಕ್ಕೆ ಸರಿ
ಯಾದದ್ದು. ಇಲ್ಲವೆ ಸದ್ಗೃಹಸ್ಥರು ಆದರದಿಂದ ಕರೆದರೆ ಅವರ ಮನೆಯ
ಲ್ಲಿ ಒಂದೇ ಅನ್ನವನ್ನು ಕೂಡ ಉಣ್ಣ ಬಹುದು. ॥ ೮೪ ॥ ಈ ಮಹೇಶ್ವ
ರರಾದ ಜನರನ್ನು ಭಕ್ತರಾದ ಸದ್ಗೃಹಸ್ಥರು ಪೂಜಿಸ ತಕ್ಕದ್ದು; ಇವರನ್ನು
ಬಿಟ್ಟು ಮಾಡಿದ ಪೂಜೆಯು ಈ ಲೋಕದಲ್ಲಿ ನಿಷ್ಫಲವಾಗುತ್ತದೆ. ॥ ೮೫ ॥
ಜಂಗಮನು ಎಲ್ಲಿಯೂ ವಸ್ತುಗಳನ್ನು ಕೂಡಿಸಿ ಇಡ ಬಾರದು, ತನಗೆ ದಾ
ನ ಮಾಡಿದ್ದನ್ನು ತಾನು ದಯಾಪರನಾಗಿ ಬಡವರಾದ ಭಕ್ತರಿಗೆ ದಾನ ಮಾ
ಡ ಬೇಕು. ॥ ೮೬ ॥ ಅತ್ಯಾಶ್ರಮಿಯು ಭಂಗಾರ, ರತ್ನ, ಮೊದಲಾದ ದಾನ
ಮಾಡಿದ ವಸ್ತುಗಳನ್ನು ಕೂಡ ಹಾಕಿ ಉಪಜೀವನ ಮಾಡುವವನಾದರೆ ಅ
ವನು ಪಾಪಿಗಳಲ್ಲಿ ಶ್ರೇಷ್ಠನಾಗುತ್ತಾನೆ. ॥ ೮೭ ॥ ಯಾವನು ಜಟಾಧಾರಿಯು
ಇಲ್ಲವೆ ಚಂಡಿಕೆ ಬಿಟ್ಟವನು ಇಲ್ಲವೆ ತಲೆ ಮುಂಡಿಸಿದವನು ಆಗಿ ಐದು ಮು
ದ್ರೆಗಳಿಂದ ಕೂಡಿ ಇದ್ದು ಸ್ತ್ರೀ ಸಂಗವನ್ನು ಮಾಡುತ್ತಾನೋ ಅವನು ನಿಸ್ಸಂ
ಶಯವಾಗಿ ನನ್ನ ದ್ರೋಹವನ್ನು ಮಾಡುತ್ತಾನೆ. ॥ ೮೮ ॥ ಯಾವತ್ತು ವ
ರ್ಣಗಳನ್ನು ಮೀರಿದ ಆಶ್ರಮದಲ್ಲಿ ವರ್ತಿಸುತ್ತಾ, ತಲೆ ಮುಂಡಿಸಿ, ಪ್ರಾಣಲಿಂ

ಚ್ಛಿರೋವಸ್ತ್ರಮುಷ್ಣೀಷಂ ವಾ ನ ಧಾರಯೇತ್ ॥ ೮೮ ॥ ಛಿನ್ನಭಿನ್ನಾದಿ ದುಷ್ಟಂ ಚ ಯದ್ವಲ್ಲಿಂಗಂ ನ ಪೂಜ್ಯತೇ। ಲಿಂಗಾಚಾರವ್ರತಭ್ರಷ್ಟೋ ಜಂಗಮಸ್ತು ನ ಪೂಜ್ಯತೇ ॥ ೮೯ ॥ ಅನ್ಯೋನ್ಯಮೇತದ್ವಂದ್ಯಂ ಸ್ಯಾಚ್ಛಿವ ಭಾವೇನ ಚೇತಸಾ। ಜಂಗಮೋ ಜಂಗಮಂ ದೃಷ್ಟ್ವಾ ನ ಪ್ರಣಾಮಂ ಕರೋತಿ ಯಃ ॥ ೯೦ ॥ ಸ ಏವ ಜಂಗಮದ್ರೋಹೀ ಮದ್ರೋಹೀ ಚ ನ ಸಂಶಯಃ। ಜಂಗಮಂ ದ್ವೇಷ್ಟಿ ಯೋ ಮೋಹಾತ್ಸ ತು ಮಾಂ ದ್ವೇಷ್ಟಿ ಶಾಂಕರಿ ॥ ೯೧ ॥ ತಸ್ಮಾದನ್ಯೋನ್ಯಮಪಿ ಚ ಪೂಜ್ಯಾಃ ಸ್ಯುರ್ಜಂಗಮಸ್ಥಲೇ। ಶಿವಭಕ್ತಿಃ ಶಿವಜ್ಞಾನಂ ಶಿವಮುದ್ರಾ ಶಿವವ್ರತಂ ॥ ೯೨ ॥ ಶಿವಲಿಂಗಾರ್ಚನಶ್ರದ್ಧಾ ವೃತ್ತ್ಯಂತರನಿರೋಧನಂ। ಏತೇ ಧರ್ಮಾ ಯತ್ರ ಸಂತಿ ಸ ಭಾರಾಭಾರವರ್ಜಿತಃ ॥ ೯೩ ॥ ಷಟ್‌ಸ್ಥಲಜ್ಞಾನಸಂಪನ್ನಃ ಷಡಂಗಾಂಗಸಮಾಧಿಮಾನ್। ಆತ್ಮವತ್ಪರದ್ರಷ್ಟಾ ಚ ಸ ಏವಾಹಂ ನ

---

ಗವನ್ನು ಧಾರಣ ಮಾಡುವವನು ತಲೆಗೆ ವಸ್ತ್ರವನ್ನು ಸುತ್ತಿ ಕೊಳ್ಳ ಬಾರದು ಇಲ್ಲವೇ ಮುಂಡಾಸನ್ನೂ ಹಾಕಿ ಕೊಳ್ಳ ಬಾರದು. ॥೮೮॥ ಒಡೆದಂಥ ಇಲ್ಲವೆ ಸೀಳಿದಂಥ ಇಲ್ಲವೆ ಎರಡನೇ ದೋಷ ಉಳ್ಳಂಥ ಲಿಂಗವು ಹ್ಯಾಗೆ ಪೂಜಿಸಲ್ಪಡುವದಿಲ್ಲವೋ ಹಾಗೆ ಲಿಂಗಾಚಾರದ ವ್ರತವನ್ನು ಬಿಟ್ಟಂಥ ಜಂಗಮನು ಪೂಜಿಸಲ್ಪಡುವದಿಲ್ಲ. ॥೮೯॥ ಈ ಜಂಗಮರಾದರೂ ಒಬ್ಬರಿಗೊಬ್ಬರು, ಈತನು ಶಿವನೇ ಎಂಬ ಭಾವವನ್ನು ಮನಸ್ಸಿನಲ್ಲಿ ಹಿಡಿದು, ವಂದಿಸ ತಕ್ಕದ್ದು. ಯಾವ ಜಂಗಮನು ಎರಡನೇ ಜಂಗಮನನ್ನು ಕಂಡು ಆತನಿಗೆ ವಂದನೆ ಮಾಡುವದಿಲ್ಲವೋ ॥ ೯೦ ॥ ಆತನು ನಿಸ್ಸಂಶಯವಾಗಿ ಜಂಗಮದ್ರೋಹವನ್ನೂ ನನ್ನ ದ್ರೋಹವನ್ನೂ ಮಾಡಿದವನು ಆಗುತ್ತಾನೆ. ಪಾರ್ವತೀ ಯಾವನು ಅಜ್ಞಾನದಿಂದ ಜಂಗಮನ ದ್ವೇಷ ಮಾಡುತ್ತಾನೋ ಆತನು ನನ್ನನ್ನೇ ದ್ವೇಷಿಸುತ್ತಾನೆ. ॥ ೯೧ ॥ ಆದದ್ದರಿಂದ ಜಂಗಮಸ್ಥಲದಲ್ಲಿ ಇರುವವರು ಒಬ್ಬರಿಗೊಬ್ಬರು ಪೂಜ್ಯರಾಗಿ ಇರುತ್ತಾರೆ. ಶಿವನ ಭಕ್ತಿಯೂ, ಶಿವಸಂಬಂಧಿಯಾದ ಜ್ಞಾನವೂ, ಶಿವನ ಮುದ್ರೆಗಳೂ, ಶಿವನ ವ್ರತವೂ ॥ ೯೨ ॥ ಶಿವಲಿಂಗವನ್ನು ಪೂಜೆ ಮಾಡುವಲ್ಲಿ ವಿಶ್ವಾಸವೂ, ಇತರ ವೃತ್ತಿಗಳನ್ನು ತಡೆಯುವದೂ, ಈ ಧರ್ಮಗಳು ಯಾವನಲ್ಲಿ ಇರುತ್ತವೋ ಆತನು ಭಾರಾಭಾರಗಳಿಲ್ಲದವನಾಗಿ ಇರುತ್ತಾನೆ. ॥ ೯೩ ॥ ಆರು ಸ್ಥಲಗಳನ್ನು ಬಲ್ಲವನೂ, ಆರು ಅಂಗಗಳಿಂದ ಕೂಡಿದ ಶರೀರದ ಸಮಾಧಿಯನ್ನು ಅರಿತವನೂ, ತನ್ನಂತೆ ಪರರನ್ನೂ ತಿಳಿಯುವವನೂ ಯಾವನೋ ಅವನು ನಿಸ್ಸಂಶಯವಾಗಿ ನಾನೇ

ಸಂಶಯ: ॥ ೯೪ ॥ ವೀರಶೈವಪರೋ ಯಸ್ತು ಯತ್ರ ತಿಷ್ಠತಿ ಪಾರ್ವತಿ ।
ತತ್ತೀರ್ಥಂ ತತ್ತಪ: ಶಾಂತಿಸ್ತತ್ರ ತಿಷ್ಠಾಮಿ ಸರ್ವದಾ ॥ ೯೫ ॥ ತೀರ್ಥ
ಯಾತ್ರಾದಿಕಂ ಚೈಷಾಂ ನಾಸ್ತಿ ಚಾನ್ಯತ್ರ ಪಾರ್ವತಿ ! ಕೈಲಾಸಾದಿಪದಾ
ಪೇಕ್ಷಾಂ ತ್ಯಜೇಲ್ಲಿಂಗಾಂಗಯೋಗಭಾಕ್ ॥ ೯೬ ॥ ಯತ್ರಾನ್ಯದೇವತಾ
ಪೂಜಾ ತತ್ಸ್ಥಾನಂ ಪರಿವರ್ಜಯೇತ್ । ಶಿವಭಕ್ತಿವಿಹೀನಂ ಚ ಜನಂ ನೈ
ವ ಸಮಾಶ್ರಯೇತ್ ॥ ೯೭ ॥ ಆದಾತೃದಾತೃದೇಯಾನಾಂ ಶಿವಚಿಹ್ನೈ
ಸುಶೋಭನಮ್ । ಶಿವಚಿಹ್ನಾಂಕಿತಂ ಗ್ರಾಹ್ಯಮನ್ಯಚ್ಚಾಂಡಾಲವಿಟ್ಸಮಮ್
॥ ೯೮ ॥ ನ ತಿಥಿರ್ನ ಚ ನಕ್ಷತ್ರಂ ನ ಯೋಗಕರಣಾದಿಕಂ । ಸಾಮುದ್ರಿ
ಕಂ ಚ ಭಕ್ತಾನಾಂ ನಾಸ್ತಿ ಲಿಂಗಾಂಗಸಂಗಿನಾಮ್ ॥ ೯೯ ॥ ಸರ್ವಂ
ಶಿವಮಯಂ ಪಶ್ಯೇದನ್ಯಭಾವೋ ನ ವಿದ್ಯತೇ । ಲಿಂಗಾಂಗಸಂಬಂಧಪ
ದಾರ್ಥಜ್ಞಾನಂ ಮೋಕ್ಷಸಾಧನಂ ॥೧೦೦ ॥ ತದೇಕಮೇವ ಮೋಕ್ಷ: ಸ್ಯಾ
ನ್ಮಮ ಲಿಂಗಾಂಗಸಂಗಿನಾಮ್ । ತಸ್ಮಾತ್ಸರ್ವೈ: ಸದಾ ಕಾರ್ಯಂ ಲಿಂಗಾ

---

ಎಂದು ತಿಳಿಯ ಬೇಕು. ॥ ೯೪ ॥ ಪಾರ್ವತಿಯೇ, ವೀರ ಶೈವ ಮಾರ್ಗದಲ್ಲಿ
ತತ್ಪರನಾದವನು ಎಲ್ಲಿ ಇರುತ್ತಾನೋ ಅದೇ ತೀರ್ಥವು, ಅದೇ ತಪಸ್ಸು, ಅ
ದೇ ಶಾಂತಿಯು; ನಾನು ಯಾವಾಗಲೂ ಅಲ್ಲಿಯೇ ಇರುತ್ತೇನೆ. ॥ ೯೫ ॥
ಪಾರ್ವತಿಯೇ ಇಂಥವರಿಗೆ ತೀರ್ಥಯಾತ್ರೆಗಾಗಿ ಎರಡನೆಯ ಕಡೆಗೆ ಹೋ
ಗ ಬೇಕಾಗುವದಿಲ್ಲ. ಲಿಂಗಧಾರಣ ಮಾಡುವವನು ಕೈಲಾಸವೇ ಮೊದಲಾದ
ಸ್ಥಾನಗಳು ತನಗೆ ದೊರೆಯ ಬೇಕೆಂಬ ಅಪೇಕ್ಷೆಯನ್ನು ಬಿಟ್ಟು ಬಿಡ ಬೇಕು.
॥ ೯೬ ॥ ಲಿಂಗಧಾರಿಯು ಯಾವ ಸ್ಥಲದಲ್ಲಿ ಬೇರೆ ದೇವತೆಗಳನ್ನು ಪೂಜಿ
ಸುವರೋ ಆ ಸ್ಥಲವನ್ನು ಬಿಟ್ಟು ಬಿಡ ಬೇಕು; ಶಿವನಲ್ಲಿ ಭಕ್ತಿ ಇಲ್ಲದ ಜ
ನರನ್ನು ಆಶ್ರಯಿಸ ಬಾರದು. ॥ ೯೭ ॥ ದಾನ ಕೊಡುವವನು, ತೆಗೆದು ಕೊ
ಳ್ಳುವವನು, ಹಾಗು ದಾನ ಮಾಡುವ ವಸ್ತು ಈ ಮೂರೂ ಶಿವನ ಚಿನ್ಹಗ
ಳಿಂದ ಅಲಂಕರಿಸಲ್ಪಟ್ಟಿರ ಬೇಕು. ಶಿವಚಿನ್ಹ ಉಳ್ಳ ವಸ್ತು ಒಂದೇ ದಾನವಾ
ಗಿ ತೆಗೆದು ಕೊಳ್ಳಲಿಕ್ಕೆ ಯೋಗ್ಯವು; ಬೇರೆಯದು ಹೊಲಿಯರ ವಿಷ್ಟೆಗೆ ಸರಿ
ಯಾದದ್ದು. ॥ ೯೮ ॥ ಲಿಂಗಧಾರಣ ಮಾಡಿದ ಭಕ್ತರಿಗೆ ತಿಥಿ ಇಲ್ಲ, ನಕ್ಷತ್ರ
ವಿಲ್ಲ, ಯೋಗ ಕರಣ ಮೊದಲಾದವುಗಳಿಲ್ಲ, ಸಾಮುದ್ರಿಕವಿಲ್ಲ. ॥ ೧೦೦ ॥ ಎ
ಲ್ಲವನ್ನೂ ಶಿವಮಯವಾಗಿ ನೋಡ ಬೇಕು; ಎರಡನೆಯ ಭಾವವೇ ಇಲ್ಲ.
ಲಿಂಗಾಂಗಸಂಬಂಧ ಉಳ್ಳ ಪದಾರ್ಥಗಳ ಜ್ಞಾನವು ಮೋಕ್ಷಕ್ಕೆ ಸಾಧನವಾ
ಗಿರುತ್ತದೆ. ॥ ೧೦೧ ॥ ನನ್ನ ಲಿಂಗವನ್ನು ಧಾರಣ ಮಾಡಿದವರಿಗೆ ಅದೋ

ರಾಧನಮಾದರಾತ್ ॥ ೧೦೧ ॥

ಪಾರಮೇಶ್ವರಾಗಮೇ ಪಟಲ ೮

ಈಶ್ವರ ಉವಾಚ

ಶೃಣು ದೇವಿ ಪ್ರವಕ್ಷ್ಯಾಮಿ ಯನ್ಮಾಂ ತ್ವಂ ಪರಿಪೃಚ್ಛಸಿ । ಸರಹಸ್ಯಂ ಸವಿಸ್ತಾರಂ ಮಹಿಮಾನಂ ಮತಸ್ಯ ಮೇ ॥ ೧ ॥ ವೀರತ್ವಂ ನಾಮ ದೇವೇಶಿ ಯಥಾ ವೀರೋ ರಣೇ ಭಟಃ । ತಥಾ ಮತೇ ಚ ಸದ್ಭಕ್ತ್ಯಾ ವೀರೋ ವೈರಾಗ್ಯತೋ ದೃಢಾತ್ ॥ ೨ ॥ ಈಷಣತ್ರಯನಿರ್ಮುಕ್ತಾ ಜ್ಞಾನವಿಜ್ಞಾನತತ್ಪರಾಃ । ದೃಢವೈರಾಗ್ಯಸಂಪನ್ನಾ ವೀರಾಸ್ತೇ ಶಿವಯೋಗಿನಃ ॥ ೩ ॥ ಅಂಧಾ ಯೇ ಲಿಂಗಿನೋ ದೇವಿ ಪರಸ್ತ್ರೀರೂಪದರ್ಶನೇ । ಯುವಾನಶ್ಚಾಪಿ ಪಟವಸ್ತೇ ವೀರಾಃ ಶಿವಯೋಗಿನಃ ॥ ೪ ॥ ಯೇ ಮೂಕಾ ಲಿಂಗಿನೋ ದೇವಿ ಪರದೋಷಾನುವಾದನೇ । ಸರ್ವಜ್ಞಾ ಅಪಿ ವಾಚಾಲಾಸ್ತೇ ವೀರಾಃ ಶಿವಯೋಗಿನಃ ॥ ೫ ॥ ಯೇ ಷಂಡಾಃ

---

ದೇ ಮೋಕ್ಷವು; ಆದದ್ದರಿಂದ ಎಲ್ಲರೂ ಯಾವಾಗಲೂ ಆದರದಿಂದ ಲಿಂಗದ ಆರಾಧನೆಯನ್ನು ಮಾಡ ತಕ್ಕದ್ದು.

ಪಾರಮೇಶ್ವರಾಗಮ ಪಟಲ ೮

ಈಶ್ವರನು ಅನ್ನುತ್ತಾನೆ— ॥ ೧ ॥ ದೇವಿಯೇ, ನೀನು ಕೇಳುವಂಥ ನನ್ನ ಮತದ ಮಹಿಮೆಯನ್ನು ಅದರ ರಹಸ್ಯದೊಡನೆ ವಿಸ್ತಾರವಾಗಿ ಹೇಳುತ್ತೇನೆ, ಕೇಳು. ॥ ೨ ॥ ದೇವತೆಗಳಿಗೆ ಒಡೆಯಳಾದ ಪಾರ್ವತಿಯೇ ವೀರತ್ವ ಅಂದರೆ— ಯುದ್ಧದಲ್ಲಿ ಹ್ಯಾಗೆ ವೀರನಾದ ಭಟನು ಇರುತ್ತಾನೋ, ಹಾಗೆ ಒಳ್ಳೇ ಭಕ್ತಿಯಿಂದಲೂ, ದೃಢವಾದ ವೈರಾಗ್ಯದಿಂದಲೂ, ಮತದಲ್ಲಿ ವೀರನಾಗುತ್ತಾನೆ. ॥೩॥ ಮೂರೂ ಈಷಣಗಳಿಂದ ಮುಕ್ತರಾದವರೂ, ಜ್ಞಾನದಲ್ಲಿಯೂ ವಿಜ್ಞಾನದಲ್ಲಿಯೂ ತತ್ಪರರಾದವರೂ, ದೃಢವಾದ ವೈರಾಗ್ಯದಿಂದ ಕೂಡಿದವರು ಇಂಥ ಶಿವಯೋಗಿಗಳು ವೀರರು. ॥ ೪ ॥ ದೇವೀ, ಯಾವ ಲಿಂಗಧಾರಿಗಳಾದ ಶಿವಯೋಗಿಗಳು, ಪ್ರಾಯದವರಿದ್ದಾಗ್ಯೂ. ಬುದ್ಧಿವಂತರಿದ್ದಾಗ್ಯೂ, ಪರಸ್ತ್ರೀಯನ್ನು ನೋಡುವಲ್ಲಿ ಕುರುಡರಾಗಿ ಇರುತ್ತಾರೋ ಅವರು ವೀರರು. ॥ ೫ ॥ ದೇವಿಯೇ, ಯಾವ ಲಿಂಗಧಾರಿಗಳಾದ ಶಿವಯೋಗಿಗಳು, ಎಲ್ಲಾ ತಿಳಿದವರಿದ್ದಾಗ್ಯೂ, ಮಾತು ಬಲ್ಲವರಿದ್ದಾಗ್ಯೂ. ಎರಡನೆಯವರ ದೋಷಗಳನ್ನು ಕುರಿತು ಮಾತಾಡುವಲ್ಲಿ ಮೂಕರಾಗಿರುತ್ತಾರೋ ಅವರು ವೀರರು. ॥ ೬ ॥ ಯಾವ ಎರಡನೆಯವರ ಹೆಂಗಸರ ವಿಷಯದಲ್ಲಿ ಷಂಡರೋ, ಎರಡನೆಯವ

ಪರಕಾಂತಾಸು ಪಂಗವೋ ಯೇಽನ್ಯಪೀಡನೇ । ಅಜಿಹ್ವಾ ಯೇ ರಸಾಸ್ವಾದೇ ವೀರಾಸ್ತೇ ಶಿವಯೋಗಿನಃ ॥ ೬ ॥ ಅಮಾನಿನೋಽದಂಭಿನಶ್ಚಾಹಿಂಸಾಕ್ಷಾಂತ್ಯಾರ್ಜವಾನ್ವಿತಾಃ । ಆಚಾರ್ಯೋಪಾಸನಪರಾ ವೀರಾಸ್ತೇ ಶಿವಯೋಗಿನಃ ॥ ೭ ॥ ಶೌಚಾತ್ಮನಿಗ್ರಹಸ್ಥೈರ್ಯೈರನಹಂಕಾರಶಾಲಿನಃ । ಸರ್ವತ್ರ ಸಮಚಿತ್ತಾ ಯೇ ವೀರಾಸ್ತೇ ಶಿವಯೋಗಿನಃ ॥ ೮ ॥

ಸತ್ಯವ್ರತೋಕ್ತಿನಿರತಾ ಅಸ್ತೇಯಧನತತ್ಪರಾಃ । ಅಪರಿಗ್ರಹಶೀಲಾ ಯೇ ವೀರಾಸ್ತೇ ಶಿವಯೋಗಿನಃ ॥೧೩॥ ಅದ್ವೇಷ್ಟಾರೋಽಧಿಕೇ ಸ್ವಸ್ಮಾತ್ ಸ್ವಸಮೇಷ್ವನಸೂಯವಃ । ಅತಿರಸ್ಕಾರಿಣೋ ನ್ಯೂನೇ ವೀರಾಸ್ತೇ ಶಿವಯೋಗಿನಃ ॥೧೪॥ ಸ್ಪರ್ಧಾಸೂಯಾತಿರಸ್ಕಾರವರ್ಜಿತಾಃ ಶಾಂತಚೇತಸಃ ಮಮ ಧ್ಯಾನಪರಾ ನಿತ್ಯಂ ವೀರಾಸ್ತೇ ಶಿವಯೋಗಿನಃ ॥ ೧೫ ॥

---

ರನ್ನೂ ಪೀಡಿಸುವಲ್ಲಿ ಅವಯವಹೀನರೋ, ರುಚಿಯಾದ ಪದಾರ್ಥಗಳನ್ನು ತಿನ್ನುವಲ್ಲಿ ನಾಲಿಗೆ ಇಲ್ಲದವರೋ, ಆ ಶಿವಿಯೋಗಿಗಳು ವೀರರು. ॥ ೬ ॥ ಯಾವ ಯೋಗಿಗಳು, ಅಭಿಮಾನ, ದಂಭಗಳು ಇಲ್ಲದವರೋ; ಅಹಿಂಸೆ, ಕ್ಷಮೆ, ನಮ್ರತ್ವಗಳಿಂದ ಕೂಡಿದವರೋ; ಗುರುವಿನ ಸೇವೆಯಲ್ಲಿ ತತ್ಪರರಾದವರೋ ಅವರು ವೀರರು. ॥ ೭ ॥ ಶುದ್ಧತ್ವ, ಆತ್ಮನಿಗ್ರಹದಲ್ಲಿ ಸ್ಥಿರತ್ವ, ಇವುಗಳಿಂದ ಕೂಡಿ ಯಾವ ಶಿವಯೋಗಿಗಳು ಅಹಂಕಾರವಿಲ್ಲದವರೂ, ಎಲ್ಲರಲ್ಲಿ ಸಮವಾದ ಚಿತ್ತ ಉಳ್ಳವರೂ, ಆಗಿರುತ್ತಾರೋ ಅವರು ವೀರರು.

॥ ೧೩ ॥ ಸತ್ಯವಾದ ವ್ರತವು ಮತ್ತು ಸತ್ಯವಾದ ಮಾತು ಇವುಗಳಲ್ಲಿ ಆಸಕ್ತಿ ಉಳ್ಳವರೂ, ತುಡುಗಿನಿಂದ ಅಲ್ಲದೆ ಒಳ್ಳೇ ಮಾರ್ಗದಿಂದ ದೊರೆತ ದ್ರವ್ಯವನ್ನು ಉಪಭೋಗಿಸುವವರೂ, ಯಾವ ಲಂಪಟವನ್ನೂ ಹಚ್ಚಿ ಕೊಳ್ಳದವರೂ, ಆದ ಶಿವಯೋಗಿಗಳು ವೀರರು. ॥ ೧೪ ॥ ತಮಗಿಂತ ಹೆಚ್ಚಿನವರು ಎಂದು ಯಾರನ್ನೂ ದ್ವೇಷಿಸದೆ ಇರುವವರೂ, ತಮಗೆ ಸರಿಯಾದವರು ಎಂದು ಹೊಟ್ಟೇ ಕಿಚ್ಚು ಪಡದೆ ಇರುವವರೂ, ತಮಗಿಂತ ಕಡಿಮೆಯವರು ಎಂದು ತಿರಸ್ಕಾರ ಮಾಡದೆ ಇರುವವರೂ, ಆದ ಶಿವಯೋಗಿಳು ವೀರರು. ॥೧೫॥ ಸ್ಪರ್ಧೆ, ತಿರಸ್ಕಾರ, ಹೊಟ್ಟೇ ಕಿಚ್ಚು ಇಲ್ಲದವರೂ, ಶಾಂತವಾದ ಮನಸ್ಸು ಉಳ್ಳವರೂ ಯಾವಾಗಲೂ ನಂನ ಧ್ಯಾನದಲ್ಲಿ ತತ್ಪರರೂ ಆದ ಶಿವಯೋಗಿಗಳು ವೀರರು.

ಯದೋತ್ತಿಷ್ಯತಿ ಸ್ವಾಪೇನ ಸ್ಮರನ್ನೇವ ಗುರುಂ ಶಿವಮ್ । ಉತ್ಥಾಯ ಚಿಂತಯೇದ್ದೇವಿ ಗುರುಂ ಮಾಂ ಲಿಂಗರೂಪಿಣಮ್ ॥ ೧೮ ॥ ಯಾವ ಲ್ಲಬ್ಧೇನ ದೇವೇಶಿ ಪತ್ರಪುಷ್ಪಾಕ್ಷತಾದಿಭಿಃ । ಸಂಪಾದ್ಯ ಪೂರ್ವದಿವಸೇ ಸರ್ವದೋಷಸಿ ಪೂಜಯೇತ್ ॥ ೧೯ ॥ ನಿತ್ಯಂ ಪೂಜೋಷಸಿ ಶಿವೇ ಮ ಧ್ಯಾಹ್ನೇ ಸಾಯಮೇವ ಚ । ಸಾಯಂ ಪ್ರಾತರಶಕ್ತೌ ತು ಪೂಜಯೇತ್ಸ ರ್ವದೋಷಸಿ ॥ ೨೦ ॥ ಶಕ್ತಾವುಷಸ್ಯರ್ಚನಾಯಾಮರ್ಚಯೇದನ್ಯಥಾ ಶಿವೆ । ಸಂಧ್ಯಾಯಾಮರ್ಚಯೇನ್ನಿತ್ಯಂ ಯಥಾ ರುಚಿ ತಥಾ ಭವೇತ್ ॥ ೨೧ ॥ ನಿತ್ಯಂ ತ್ರಿಕಾಲತೋ ನಿತ್ಯಂ ಮಧ್ಯಾಹ್ನೇಽರ್ಚನಮೈಚ್ಛಿಕಮ್ । ನಿತ್ಯಂ ಪ್ರಾತಶ್ಚ ಸಾಯಂ ಚ ಪೂಜಾ ನಿತ್ಯೈಕದಾ ಶಿವೇ ॥ ೨೨ ॥ ಅಶ ಕ್ತಶ್ಚಾಸಹಾಯಶ್ಚ ಯಥೇಚ್ಛಂ ಪೂಜಯೇತ್ಸದಾ । ಶಕ್ತೋಽಪಿ ಯೋ ನ ಕುರುತೇ ರೌರವೇ ನರಕೇ ವಸೇತ್ ॥ ೨೩ ॥ ಸತ್ಯಾಮಪಿ ಚ ಸಾಮ

---

॥ ೧೮ ॥ ದೇವಿಯೇ, ಮಲಗಿದ ವೀರಶೈವನು ಏಳುತ್ತಲೇ ಗುರುವಾದ ಶಿವನನ್ನು ಸ್ಮರಿಸುತ್ತಾ ಎದ್ದ ಬಳಿಕ ಲಿಂಗರೂಪದ ಗುರುವಾದ ನನ್ನನ್ನು ಧ್ಯಾನಿಸಬೇಕು. ॥ ೧೯ ॥ ದೇವತೆಗಳಿಗೆ ಒಡೆಯಳಾದ ಪಾರ್ವತಿಯೇ, ಎಷ್ಟು ಪತ್ರ, ಪುಷ್ಪ ಅಕ್ಷತೆ, ಮೊದಲಾದವು ದೊರೆಯುತ್ತವೋ, ಅಷ್ಟನ್ನು ಮೊದ ಲನೆಯ ದಿವಸ ದೊರಕಿಸಿ ಇಟ್ಟು, ಅವುಗಳಿಂದ ಯಾವಾಗಲೂ ಉಷಃಕಾ ಲದಲ್ಲಿ ಪೂಜೆ ಮಾಡಬೇಕು. ॥ ೨೦ ॥ ಪಾರ್ವತೀ, ನಿತ್ಯದಲ್ಲಿಯೂ ಉಷಃ ಕಾಲದಲ್ಲಿಯೂ, ಮಧ್ಯಾಹ್ನದಲ್ಲಿಯೂ, ಸಾಯಂಕಾಲದಲ್ಲಿಯೂ ಪೂಜೆ ಮಾಡ ಬೇಕು. ಸಂಜೆ ಮುಂಜಾನೆ ಪೂಜೆ ಮಾಡುವ ಸಾಮರ್ಥ್ಯವಿಲ್ಲದೆ ಹೋ ದರೆ ಯಾವಾಗಲೂ ಉಷಃಕಾಲದಲ್ಲಿ ಮಾಡಬೇಕು. ॥ ೨೧ ॥ ಪಾರ್ವತೀ, ಉಷಃಕಾಲದಲ್ಲಿ ಪೂಜೆ ಮಾಡುವ ಸಾಮರ್ಥ್ಯವಿದ್ದರೆ ಮಾಡಬೇಕು; ಇಲ್ಲ ದೆ ಇದ್ದರೆ ನಿತ್ಯವು ಸಂಜೆಯಲ್ಲಿ ಪೂಜಿಸ ಬೇಕು. ಹ್ಯಾಗೆ ಸೇರುತ್ತದೋ ಹಾ ಗೆ ಮಾಡ ಬೇಕು. ॥ ೨೨ ॥ ನಿತ್ಯವೂ ಪೂಜೆಯನ್ನು ಮೂರು ಹೊತ್ತಿಗೂ ನಿಯಮದಿಂದ ಮಾಡಬೇಕು; ( ಹಾಗೆ ಆಗದೆ ಇದ್ದರೆ ) ಮಧ್ಯಾಹ್ನದಲ್ಲಿ, ಇ ಚ್ಛೆ ಇಲ್ಲದೆ ಇದ್ದರೆ, ಬಿಟ್ಟು ಸಾಯಂಕಾಲದಲ್ಲಿಯೂ ಬೆಳಗಿನಲ್ಲಿಯೂ ಮಾ ಡ ಬೇಕು; ಅದೂ ಆಗದೇ ಇದ್ದರೆ, ಪಾರ್ವತೀ, ಒಮ್ಮೆ ಆದರೂ ತಪ್ಪ ದೆ ಮಾಡಬೇಕು ॥ ೨೩ ॥ ಶಕ್ತಿಯೂ ಸಹಾಯವೂ ಇಲ್ಲದವನು ಯಾವಾ ಗಲೂ ತನ್ನ ಮನಸಿನ ಪ್ರಕಾರ ಪೂಜೆ ಮಾಡಬೇಕು. ಸಹಾಯವು ಇದ್ದಾ ಗ್ಯೂ ಯಾವನು ಮಾಡುವದಿಲ್ಲವೋ ಅವನು ರೌರವವೆಂಬ ನರಕದಲ್ಲಿ ಬೀ ಳುತ್ತಾನೆ. ॥ ೨೪ ॥ ನನ್ನನ್ನು ಪೂಜಿಸುವದಕ್ಕೆ ಸಾಮರ್ಥವೂ, ಸಾಮಗ್ರಿ

ಗ್ರ್ಯಾಂ ಶಕ್ತಾವಪಿ ಮಮಾರ್ಜನೇ । ನ ಪೂಜಯೇದ್ಯಃ ಶಾಠ್ಯೇನ ಕಾಮು ಕೋ ವಿಷಯಾತುರಃ ॥ ೨೪ ॥ ಕರ್ಮಜ್ಞಾನೋಭಯಭ್ರಷ್ಟೋ ನಿಮ ಗ್ನೋ ದುಃಖಸಾಗರೇ । ರೌರವೇ ನರಕೇ ಘೋರೇ ವಸೇದಾಚಂದ್ರತಾ ರಕಮ್ ॥ ೨೫ ॥ ಉಷಃ ಸೂರ್ಯೋದಯಾತ್ಪೂರ್ವಂ ಮುಹೂರ್ತಾವ ಧ್ಯನೇಹಸಿ । ಪೂಜಾಕಾಲಃ ಸ ವಿಜ್ಞೇಯಃ ಶಿವತ್ವಪ್ರಾಪ್ತಿಕಾರಕಃ ॥ ೨೬॥ ಅಥವಾನಂತರಂ ಭಾನೋರುದಯಾದರ್ಚಯೇಚ್ಛಿವಮ್ । ಮಧ್ಯಾಹ್ನೇಽ ಪಿ ತಥಾ ಸಾಯಂ ಕೃತ್ವಾ ನಕ್ಷತ್ರದರ್ಶನಮ್ ॥ ೨೭ ॥ ನಿರ್ವರ್ತ್ಯೈಷ ಸಿಕೀಂ ಪೂಜಾಂ ಜಪಸ್ತೋತ್ರಾದಿಕಂ ಪ್ರಿಯೇ । ನಿರ್ಗಮೇದಟಿತುಂ ಭೈ ಕ್ಷಂ ಪ್ರಣಮ್ಯ ಗುರುಮಾದಿತಃ ॥ ೨೮ ॥ ಪರ್ಯಟೇಲ್ಲಿಂಗಿನಾಮೇವ ಭ ಕ್ತಾನಾಂ ಶಿವಯೋಗಿನಾಮ್ । ಯಾವದಿಚ್ಛನ್ ಗೃಹದ್ವಾರಂ ಪಕ್ವಂ ವಾಽ ಪಕ್ವಮೇವ ವಾ ॥೩೦॥ ನಿಬದ್ಧಪಾದಘಂಟೋ ವಾ ಘಂಟೊ ವಾ ಜಯ ಘಂಟಿಕಃ । ಶಂಖಶ್ಚ ಶೃಂಗಿನಾದೋ ವಾ ದಂಡಘಂಟೋಽಪಿ ಪರ್ಯಟನ್

---

ಯೂ, ಇದ್ದಾಗ್ಯೂ ಯಾವನು ಕಾಮುಕನಾಗಿಯೂ, ವಿಷಯಸುಖಕ್ಕೆ ಆ ತುರನಾಗಿಯೂ ಠಕ್ಕತನದಿಂದ ಪೂಜಿಸುವದಿಲ್ಲವೋ ॥ ೨೪ ॥ ಆವನು ಕ ರ್ಮ, ಜ್ಞಾನ, ಈ ಎರಡರಿಂದಲೂ ಭ್ರಷ್ಟನಾಗಿ, ದುಃಖಸಾಗರದಲ್ಲಿ ಮು ಳುಗಿ, ಚಂದ್ರನೂ ನಕ್ಷತ್ರಗಳೂ ಇರುವ ವರೆಗೆ ರೌರವವೆಂಬ ಭಯಂಕರ ವಾದ ನರಕದಲ್ಲಿ ಬಿದ್ದು ಕೊಂಡು ಇರುವನು. ॥ ೨೬ ॥ ಸೂರ್ಯೋದಯ ಕ್ಕೆ ಎರಡು ಗಳಿಗೆ ಇರುವಾಗಿನ ಹೊತ್ತು ಉಷಃಕಾಲವು ಎನಿಸುತ್ತದೆ. ಆ ದೇ ಶಿವತ್ವವನ್ನು ಪ್ರಾಪ್ತಿ ಮಾಡಿ ಕೊಡುವ ಪೂಜಾಸಮಯವು ಎಂದು ತಿಳಿಯಬೇಕು. ॥ ೨೭ ॥ ಅಥವಾ ಸೂರ್ಯನು ಮೂಡಿದ ಮೇಲೂ, ಮಧ್ಯಾ ಹ್ನದಲ್ಲಿಯೂ, ಸಂಜೆಗೆ ನಕ್ಷತ್ರಗಳ ದರ್ಶನವು ಆದ ಮೇಲೂ ಪೂಜಿಸ ಬೇ ಕು. ॥ ೨೮ ॥ ಪ್ರಿಯೇ, ಬೆಳಗಿನ ಪೂಜೆಯನ್ನು, ಜಪ ಸ್ತೋತ್ರ ಮೊದಲಾ ದವುಗಳನ್ನೂ, ಮುಗಿಸಿಕೊಂಡು, ಗುರುವಿಗೆ ನಮಸ್ಕಾರ ಮಾಡಿ, ಭಿಕ್ಷೆಗೆ ಹೊರಡ ಬೇಕು. ॥ ೩೦ ॥ ಅಟ್ಟ ಕೂಳನ್ನೇ ಆಗಲಿ, ಒಣ ಭಿಕ್ಷೆಯನ್ನೇ ಆ ಗಲಿ, ಎಷ್ಟು ತನಗೆ ಇಚ್ಛೆ ಇರುವದೋ ಅಷ್ಟನ್ನು ಬೇಡುವದಕ್ಕೆ ಲಿಂಗವ ನ್ನು ಧರಿಸಿದಂಥ ಶಿವಯೋಗಿಗಳಾದ ಭಕ್ತರ ಮನೆ ಬಾಗಿಲಿಗೆ ಮಾತ್ರ ಹೋ ಗಬೇಕು. ॥ ೩೧ ॥ ಪಾದದ ಘಂಟೆಯನ್ನಾಗಲಿ, ಜಯ ಘಂಟೆಯನ್ನಾಗಲಿ, ಕ ಟ್ಟಿ ಕೊಂಡು, ಇಲ್ಲವೆ ಘಂಟೆ ಇಲ್ಲದೆ, ಶಂಖ ಕೋಡಿನ ತತ್ತೂರಿಗಳ ನಾದ ವುಳ್ಳವನಾಗಿ ಇಲ್ಲವೆ ಕೈಗಟ್ಟಿಗೆಗೆ ಘಂಟೆ ಕಟ್ಟಿ ಕೊಂಡು, ತಿರುಗಾಡ ಬೇ

॥ ೩೧ ॥ ರುದ್ರಾಕ್ಷಾಣಾಂ ಚ ಮಾಲಾಭಿಃ ಕಂಥಾಕಂಬಲಭೂಷಿತಃ । ವಿಜ್ಞಾಪಯಿತ್ವಾ ಗೃಹಿಣಃ ಕಯಾಚಿಚ್ಛಬ್ದಸಂಜ್ಞಯಾ ॥ ೩೨ ॥ ಭಿಕ್ಷೆತ್ಯಾಜ್ಞಾಪಯೇಲ್ಲಿಂಗೀ ಗುರುಧರ್ಮಮನುಸ್ಮರನ್ । ಗೃಹೀ ವಾ ಗೃಹಿಣೀ ವಾಪಿ ನತ್ವಾ ಜಂಗಮಮಾನಯೇತ್ ॥ ೩೩ ॥ ಶಿವಬುದ್ಧ್ಯಾರ್ಚಯಿತ್ವಾ ತಂ ಸಂತೃಪ್ತಂ ಪ್ರೇಷಯೇತ್ಪುನಃ । ಯದ್ಯಪಕ್ವಂ ಸಮಾನೀತಂ ಪಕ್ವಂ ಕೃತ್ವಾರ್ಪಯೇನ್ಮಮ ॥ ೩೪ ॥ ಯದಿ ಸ್ಯಾತ್ಪಕ್ವಮಾನೀತಮಶ್ನೀಯಾದರ್ಪಿತಂ ಮಮ । ನ ಚೈಕಭುಕ್ತಿನಿಯಮೋ ನೋಪವಾಸಾದಿ ನೋವ್ರತಂ ॥ ೩೫ ॥ ಯಥೈವ ಗಚ್ಛನ್ಮಾರ್ಗೇಷು ಶೀತವಾತಾತಪಾದಿಕಮ್ ॥ ೩೬ ॥ ವಿಷಹ್ಯ ಲಘು ದೇವೇಶಿ ಸ್ವಪದಂ ಚಾಧಿಗಚ್ಛತಿ । ನ ಸ್ತ್ರೀಷು ನೈವಾನರ್ಹೇಷು ನಾಧರ್ಮೇಷ್ವಪಿ ಜನ್ಮಸು ॥ ೩೭ ॥ ನ ತಿರ್ಯಗಾದಿನೀಚೇಷು ಜಾಯತೇ ವೀರಶೈವಗಃ ।

---

ಕು. ॥ ೩೧ ॥ ರುದ್ರಾಕ್ಷದ ಮಾಲೆಗಳಿಂದಲೂ, ಮಹಾಲಿಂಗ ಕಪನಿ ಕಂಬಳಿಗಳಿಂದಲೂ ಭೂಷಿತನಾಗಿ ಯಾವದಾದರೊಂದು ಶಬ್ದದ ಗುರ್ತಿನಿಂದ ತಾನು ಬಂದದ್ದನ್ನು ಮನೆಯುವರಿಗೆ ತಿಳಿಸಿ, ॥ ೩೨ ॥ ಲಿಂಗಧಾರಿಯು, ತಾನು ಗುರುವು, ತನ್ನ ಧರ್ಮ ಅಜ್ಞೆ ಮಾಡ ತಕ್ಕದ್ದು, ಎಂಬದನ್ನು ನೆನಪಿಗೆ ತಂದು, ಭಿಕ್ಷೆ ಎಂದು ಆ ಮನೆಯುವರಿಗೆ ಅಜ್ಞೆಯನ್ನು ಮಾಡತಕ್ಕದ್ದು. ಮನೆಯ ಒಡೆಯನೇ ಆಗಲಿ ಒಡತಿಯೋ ಆಗಲಿ ಆ ಜಂಗಮನಿಗೆ ನಮಸ್ಕಾರ ಮಾಡಿ ಆತನನ್ನು ಕರೆದುಕೊಂಡು ಬಂದು, ॥ ೩೩ ॥ ಈತನು ಶಿವನೇ ಎಂದು ತಿಳಿದು ಆತನನ್ನು ಪೂಜಿಸಿ ತೃಪ್ತಿ ಪಡಿಸಿ ತಿರಿಗಿ ಕಳುಹಿಸ ಬೇಕು. ಅಡದೆ ಇರುವ ಪದಾರ್ಥಗಳನ್ನು ತಂದಿದ್ದರೆ ಅವುಗಳನ್ನು ಅಟ್ಟು ನನಗೆ ಅರ್ಪಿಸ ಬೇಕು. ॥ ೩೪ ॥ ಅಟ್ಟ ಕೂಳನ್ನೇ ಭಿಕ್ಷೆ ಬೇಡಿ ತಂದಿದ್ದರೆ ಅದನ್ನು ನನಗೆ ಅರ್ಪಣ ಮಾಡಿ ಉಣ್ಣ ಬೇಕು. ಒಂದು ಹೊತ್ತಿನ ನಿಯಮವನ್ನಾಗಲಿ, ಉಪವಾಸವನ್ನಾಗಲಿ, ಬೇರೆ ವ್ರತವನ್ನಾಗಲಿ, ಮಾಡ ಬಾರದು. ॥ ೩೫ ॥ ಹ್ಯಾಗೆ ನಡೆಯುವವನು ಮಾರ್ಗದಲ್ಲಿ ಬಿಸಿಲು, ಚಳಿ, ಗಾಳಿಗಳನ್ನು ॥ ೩೬ ॥ ಸಹನ ಮಾಡಿಕೊಂಡು ತನ್ನ ಸ್ಥಲಕ್ಕೆ ತೀವ್ರವಾಗಿ ಬರುತ್ತಾನೋ ಹಾಗೆ ವೀರಶೈವನು ಸ್ತ್ರೀಯರಲ್ಲಿಯೂ, ಅಯೋಗ್ಯರಲ್ಲಿಯೂ, ಧರ್ಮಭ್ರಷ್ಟರಲ್ಲಿಯೂ, ॥ ೩೭ ॥ ಹಕ್ಕಿಗಳು ಮೊದಲಾದ ಕಡಿಮೆಯ ಜಾತಿಯ ಪ್ರಾಣಿಗಳಲ್ಲಿಯೂ ಹುಟ್ಟುವದಿಲ್ಲ.

———

## ಪಟಲ ೯

ದೈವೋಪಲಬ್ಧ ಸುಖಭುಕ್ ಶಿವಪೂಜಾಪರಾಯಣಃ । ವೀರಶೈವಪದಂ ಪ್ರಾಪ್ಯ ಸುಖೇನೋಪೈತಿ ನಿರ್ವೃತಿಮ್ ॥ ೪೦ ॥ ಪಾತ್ರಮೇಕಂ ತು ಭೈಕ್ಷಾಯಾಃ ಕಂಥೈಕಾ ಕೃಷ್ಣಕಂಬಲಃ । ದಂಡೋ ಧ್ವನಿಃ ಶಿವೇ ಭಕ್ತಿರ್ವೀರಶೈವಸ್ಯ ಲಕ್ಷಣಮ್ ॥ ೪೧ ॥ ಶಾಂತಿರ್ನಿಷ್ಠಾ ಭೂತದಯಾ ಚಿತ್ತವೃತ್ತಿನಿರೋಧನಮ್ । ಸರ್ವತ್ರೇಶ್ವರತಾದಾತ್ಮ್ಯಂ ವೀರಶೈವಸ್ಯ ಲಕ್ಷಣಂ ॥೪೨॥ ನೈವ ರಕ್ಷಂತಿ ವಿಷಯಾ ನ ಭೋಗಾ ನ ಚ ಬಾಂಧವಾಃ । ನೈವ ಸಂಪನ್ನ ದಾರಿದ್ರ್ಯಂ ನಿಷ್ಠೈಕಾ ಸತಿ ಶಂಕರೇ ॥ ೪೩ ॥ ಅರಣ್ಯೇ ಸಂತಿ ಪತ್ರಾಣಿ ನದ್ಯಾಂ ಸ್ವಾದೂದಕಾನಿ ಚ । ಸಂತಿ ಹಸ್ತೌ ಚ ಪಾದೌ ಚ ಮಲ್ಲಿಂಗಂ ನಿರುಪದ್ರವಮ್ ॥ ೪೪ ॥ ನೋದ್ಯಮೊ ನಾಸ್ಯ ಸೇವಾ ವಾ ನಾಯಾಸೋ ನಾರ್ಥಸಂಕ್ಷಯಃ । ಆರಾಧ್ಯ ಸುಖಮೀಶಂ ಮಾಂ ಧೀಮಾನೇತಿ ಶಿವಂ ಪದಮ್ ॥ ೪೫ ॥ ಪ್ರಾಪ್ಯ ವೀರಮತಂ ತ್ಯಕ್ತ್ವಾನ್ಯಥೇಚ್ಛೇ

---

## ಪಟಲ ೯

॥ ೪೦ ॥ ದೈವದಿಂದ ದೊರೆತಷ್ಟು ಸುಖವನ್ನು ಉಪಭೋಗಿಸುತ್ತಲೂ, ಶಿವನ ಪೂಜೆಯಲ್ಲಿ ತತ್ಪರನಾಗಿ ಇರುತ್ತಲೂ, ವೀರಶೈವನೆಂಬ ಹೆಸರನ್ನು ಪಡೆದು ಮನುಷ್ಯನು ಅನಾಯಾಸದಿಂದ ಮುಕ್ತಿಯನ್ನು ಹೊಂದುತ್ತಾನೆ.॥೪೧॥ ಭಿಕ್ಷೆಯ ಪಾತ್ರೆ ಒಂದು, ಒಂದು ಮಹಾಲಿಂಗಕಪನಿ, ಒಂದು ಕರಿಯ ಕಂಬಳಿ, ಕೋಲು, ಕೂಗು, ಶಿವನಲ್ಲಿ ಭಕ್ತಿ, ಇವು ವೀರಶೈವನ ಲಕ್ಷಣಗಳು. ॥ ೪೨ ॥ ಶಾಂತಿ, ನಿಷ್ಠೆ, ಭೂತದಯೆ, ಮನಸ್ಸಿನ ಹರಿದಾಟವನ್ನು ನಿಲ್ಲಿಸುವದು, ಎಲ್ಲವನ್ನೂ ಈಶ್ವರಮಯವಾಗಿ ಕಾಣುವದು, ಇವು ವೀರಶೈವನ ಲಕ್ಷಣಗಳು. ॥ ೪೩ ॥ ಶಂಕರನಲ್ಲಿ ಭಕ್ತಿಯಲ್ಲದೆ ವಿಷಯಗಳೂ, ಭೋಗಗಳೂ, ಬಾಂಧವರೂ, ಸಂಪತ್ತಿಯೂ, ಬಡತನವೂ, ಮನುಷ್ಯನನ್ನು ರಕ್ಷಿಸಲಾರವು. ॥ ೪೪ ॥ ಅರಣ್ಯದಲ್ಲಿ ಪತ್ರಿ ಇರುತ್ತದೆ; ನದಿಯಲ್ಲಿ ಸವಿ ನೀರು ಇರುತ್ತದೆ; ಕೈಕಾಲುಗಳು ಉಂಟು; ನನ್ನ ಲಿಂಗವು ನಿರುಪದ್ರವವಾಗಿ ಇರುತ್ತದೆ; ॥೪೫॥ ಅದಕ್ಕೆ ಉದ್ಯೋಗ ಮಾಡಬೇಕಾಗುವದಿಲ್ಲ, ಸೇವೆ ಇಲ್ಲ, ಆಯಾಸವಿಲ್ಲ, ದುಡ್ಡು ವೆಚ್ಚ ಆಗುವದಿಲ್ಲ; ಆದ್ದರಿಂದ ಈಶನಾದ ನನ್ನನ್ನು ಅನಾಯಾಸದಿಂದ ಆರಾಧಿಸಿ ಬುದ್ಧಿವಂತನು ಶಿವಪದವನ್ನು ಪಡೆಯುತ್ತಾನೆ. ॥ ೪೬ ॥ ವೀರಶೈವ ಮತವನ್ನು ಪಡೆದು ಯಾವನು ನನ್ನನ್ನು ಬೇರೆ ದೇವತೆಯನ್ನು ಬಯಸುತ್ತಾನೋ ಆತನು ನಾಯಿಯ ಬಾಲವನ್ನು ಹಿಡಿದು ಸಮುದ್ರ ದಾ

ಧ್ಯ: ಪರಂ ಮಮ । ಸ ಗೃಹೀತ್ವಾ ಶುನ: ಪುಚ್ಛಂ ತರ್ತುಮಿಚ್ಛತಿ ಸಾಗರ ವ್ ॥೫೩॥ ಜ್ಞಾತ್ವಾ ಗುರುಮುಖಾಚ್ಛಾಸ್ತ್ರಂ ಧೃತಕಾಷಾಯದಂಡಕ: । ಪ್ರವ್ರಜೇದ್ಗೃಹಮುತ್ಸೃಜ್ಯ ಶಿಖೀ ಮುಂಡ್ಯಪಿ ವಾ ಜಟೀ ॥ ೫೪ ॥

ಪಟಲ ೧೫

ವನ ಏವ ವಸೇನ್ನಿತ್ಯಮುಜನಗ್ರಾಮಸಂಗತಿ: । ನ ವಿಶೇನ್ನಗರಂ ಗ್ರಾಮಂ ಗೃಹಂ ವಾ ಗೃಹಮೇಧಿನಾವ್ ॥ ೫೬ ॥ ಯದಿ ಭಕ್ತ: ಸಮಾನೀಯ ದದ್ಯಾದ್ಭೈಕ್ಷಂ ಮಹೇಶ್ವರಿ । ನ ರುಚಿಂ ನಾಪಿ ವಾ ಸೌಖ್ಯಂ ಚಿಂತಯೇನ್ನ ಹಿತಾಹಿತೇ ॥ ೫೭ ॥ ನ ಸ್ತ್ರೀಣಾಂ ವೀಕ್ಷಯೇದಾಸ್ಯಂ ನ ನರ್ಮ ಶ್ರುಣುಯಾದ್ವಚ: । ನ ಸಮಾಜಂ ಜನೈರನ್ಯೈರ್ನೇಚ್ಛಾಸಂಚಾರವಿೞಶರಿ ॥೫೮॥ ಶಯೀತ ಭೂತಲೇ ಖಟ್ವಾಂ ವರ್ಜಯೇಚ್ಛಯನೇ ಶಿವೇ । ವಸೀತ ವಾಸ: ಶಿಥಿಲಂ ವಿವರ್ಣಂ ಯದ್ಯದೀಪ್ಸತಿ ॥ ೫೯ ॥ ಮುಂಡೀ ಜಟೀ ಶಿಖೀ ವಾಪಿ ಕೀರ್ಣಕೇಶೋಪಿವಾ ಭವೇತ್ । ಯದಿ ಮುಂಡೀ ಶಿಖೀ

---

ಟಲಿಕ್ಕೆ ಇಚಿಸುತ್ತಾನೆ. ॥ ೫೪ ॥ ಗುರುವಿನಿಂದ ಶಾಸ್ತ್ರವನ್ನು ತಿಳಿದು ಕೊಂಡು, ಕಾವಿಯ ವಸ್ತ್ರವನ್ನು ಧರಿಸಿ, ಕೋಲು ಹಿಡಿದು, ಜಂಡಿಕೆ ಇಲ್ಲವೆ ಜಡೆ ಬಿಟ್ಟು ಅಥವಾ ತಲೆ ಮುಂಡಿಸಿ, ಮನೆ ಬಿಟ್ಟು ಹೊರಡ ಬೇಕು

ಪಟಲ ೧೫

॥ ೫೬ ॥ ಜನರ ಸಂಗತಿ ಇಲ್ಲದೆ ಆತನು ನಿತ್ಯವೂ ವನದಲ್ಲಿಯೇ ವಾಸ ಮಾಡ ಬೇಕು. ಶಹರವನ್ನಾಗಲಿ, ಹಳ್ಳಿಯನ್ನಾಗಲಿ, ಗ್ರಹಸ್ಥರ ಮನೆಯನ್ನಾಗಲಿ, ಪ್ರವೇಶ ಮಾಡ ಬಾರದು. ॥ ೫೭ ॥ ಮಹೇಶ್ವರಿಯೇ, ಯಾವನಾದರೂ ಭಕ್ತನು ಭಿಕ್ಷೆಯನ್ನು ತಂದು ಕೊಟ್ಟರೆ, ಆತನು ರುಚಿಯನ್ನು ಇಲ್ಲವೆ ಸೌಖ್ಯವನ್ನು ಇಲ್ಲವೆ ಹಿತವಾದದ್ದು ಹಿತವಲ್ಲದ್ದು ಎಂಬದನ್ನು ನೆನಿಸ ಕೂಡದು. ॥ ೫೮ ॥ ಸ್ತ್ರೀಯರ ಮುಖವನ್ನು ನೋಡ ಬಾರದು; ನಗೆಯ ಮಾತನ್ನು ಕೇಳ ಬಾರದು; ಎರಡನೇ ಜನರ ಕೂಡ ಸಂಗತಿ ಮಾಡ ಬಾರದು; ಮನಸಿಗೆ ಬಂದತ್ತ ತಿರುಗಾಡ ಬಾರದು. ॥ ೫೯ ॥ ಪಾರ್ವತಿಯೇ, ಮಲಗುವದಕ್ಕೆ ಹೊರಸು ಮೊದಲಾದದ್ದನ್ನು ಬಿಟ್ಟು ನೆಲದ ಮೇಲೆ ಮಲಗಬೇಕು; ಎಳೆ ಬಿಚ್ಚಿದ್ದೇ ಆಗಲಿ, ಬಣ್ಣ ಹೋದದ್ದೇ ಆಗಲಿ, ಎಂಥಾ ವಸ್ತ್ರವು ದೊರೆಯುತ್ತದೋ ಅಂಥಾದ್ದನ್ನೇ ಧರಿಸಬೇಕು. ॥ ೬೦ ॥ ಜಡೆ ಇಲ್ಲವೆ ಜಂಡಿಕೆ, ಇಲ್ಲವೆ ತಲೆಯ ಮೇಲೆ ಅಲ್ಲಲ್ಲಿ ಕೂದಲು, ಬಿಡ ಬಹುದು; ಅಥವಾ ತಲೆ ಎಲ್ಲ ಬೋಳಿಸ ಬಹುದು. ಜಂಡಿಕೆ ಬಿಟ್ಟಿದ್ದರೆ ಇಲ್ಲವೆ ತಲೆ ಮುಂ

ವಾ ಸ್ಯಾದಭ್ಯಂಗಂ ಸ್ವೇಚ್ಛಯಾ ಯದಿ ॥ ೬೦ ॥ ಜಟೀ ಯದಿ ನ ಕು ರ್ವೀತ ತೈಲಾಭ್ಯಂಗಮಪಿ ಕ್ವಚಿತ್ । ಯದಿ ಪೂರ್ವಂ ಜಟಾಧಾರೀ ನ ಪುನಃ ಕ್ಷೌರಮಾಚರೇತ್ ॥ ೬೧॥ ಶಿಖೀ ಯದಿ ಶಿವೇ ಲಿಂಗೀ ಕುರ್ಯಾ ದಭ್ಯಂಗಮೈಚ್ಛಿಕಮ್ । ನ ಚರ್ಮಪಾತ್ರಸಂಸ್ಪೃಷ್ಟಂ ತೈಲಂ ಸ್ಪೃಶ್ಯೇನ್ನ ದಾತ್ಮಕಮ್ ॥ ೬೨ ॥ ನ ನರ್ತನಾದಿಕಂ ಚಿತ್ರಮೀಕ್ಷೇದೇಕಾಂತತೊ ವ ಸೇತ್ ॥ ೬೩ ॥ ಶಾಸ್ತ್ರೇಣ ಗುರುವಾಕ್ಯೇನ ಯಥಾವತ್ಸಂಪ್ರವರ್ತಿನೌ । ಮಮ ಲೋಕೇ ನಿವಸತಃ ಸ ಶಿಷ್ಯಃ ಸ ಗುರುಃ ಶಿವೇ ॥ ೬೬ ॥

## ॥ ಸುಪ್ರಬೋಧಾಗಮೆ ॥

ನಿರಾಭಾರಸ್ಯ ವೀರಸ್ಯ ಲಕ್ಷಣಂ ಶ್ರುಣು ಪಾರ್ವತಿ । ಸರ್ವಸ್ರಕ್ಚಂದ ನಾದೀನಿ ವನಿತಾದಿ ಮಹಾಸುಖಮ್ ॥ ೧ ॥ ತಿರಸ್ಕೃತ್ಯ ಸ್ವಚಿತ್ತಂ ತನ್ನ್ಯ ಸೇತ್ಪರಶಿವೇ ಸದಾ । ಸ್ವಾತ್ಮನ್ಯೈಕಂ ವಿದಿತ್ವಾ ತು ಸರ್ವಸಂಗವಿವರ್ಜಿ ತಃ ॥ ೨ ॥ ದಂಡಕೌಪೀನಕಾಷಾಯಜಟಾಯೋಗಕಮಂಡಲೂನ್ । ಧೃ

---

ಡಿಸಿದ್ದರೆ ತನ್ನ ಮನಸಿಗೆ ಬಂದರೆ ಎಣ್ಣೆ ಹಚ್ಚಿ ಕೊಂಡು ಸ್ನಾನ ಮಾಡ ಬ ಹುದು. ॥ ೬೧ ॥ ಜಡೆ ಬಿಟ್ಟಿದ್ದರೆ ಎಣ್ಣೆ ಹಚ್ಚಿ ಎಂದೂ ಸ್ನಾನ ಮಾಡಬಾ ರದು. ಒಮ್ಮೆ ಜಡೆ ಬಿಟ್ಟ ಮೇಲೆ ಪುನಃ ಕ್ಷೌರವನ್ನು ಎಂದೂ ಮಾಡಿಸ ಬಾ ರದು. ॥ ೬೨ ॥ ಚಂಡಿಕೆ ಬಿಟ್ಟವನು ಆಗಿದ್ದರೆ ಇಚ್ಛೆಯ ಪ್ರಕಾರ ಎಣ್ಣೆ ಹ ಚ್ಚಿ ಸ್ನಾನ ಮಾಡ ಬಹುದು; ಆದರೆ ತೊಗಲಿನ ಬುದ್ದಲಿಯೊಳಗೆ ಹಾಕಿದ ಎಣ್ಣೆ ಮದವನ್ನುಂಟು ಮಾಡುವಂಥಾದು, ಅದನ್ನು ಮುಟ್ಟ ಬಾರದು. ॥೬೩॥ ನರ್ತನವನ್ನೂ ಚಿತ್ರಗಳನ್ನೂ ನೋಡ ಬಾರದು; ಏಕಾಂತದಲ್ಲಿ ವಾಸ ಮಾ ಡ ಬೇಕು.

॥ ೬೬ ॥ ಪಾರ್ವತೀ, ಶಾಸ್ತ್ರಕ್ಕೂ ಗುರುವಿನ ವಾಕ್ಯಕ್ಕೂ ಅನುಸರಿಸಿ ಯೋಗ್ಯವಾದ ರೀತಿಯಿಂದ ನಡೆದರೆ ಆ ಗುರುವೂ ಆ ಶಿಷ್ಯನೂ ನನ್ನ ಲೋ ಕದಲ್ಲಿ ವಾಸ ಮಾಡುತ್ತಾರೆ.

## ಸುಪ್ರಬೋಧಾಗಮವು

॥ ೧ ॥ ಪಾರ್ವತೀ, ನಿರಾಭಾರನಾದ ವೀರಶೈವನ ಲಕ್ಷಣವನ್ನು ಕೇಳು:-- ಆತನು ಚಂದನ ಹೂವಿನ ಮಾಲೆ ಮೊದಲಾದವುಗಳನ್ನೂ, ಹೆಂಗಸು ಮೊ ದಲಾದ ದೊಡ್ಡ ಸುಖವನ್ನೂ ॥ ೨ ॥ ತಿರಸ್ಕರಿಸಿ ತನ್ನ ಚಿತ್ತವನ್ನು ಯಾವಾ ಗಲೂ ಪರಶಿವನಲ್ಲಿ ಇಟ್ಟಿರ ಬೇಕು. ಸರ್ವಸಂಗ ಪರಿತ್ಯಾಗ ಮಾಡಿ ॥೩॥ ದಂಡ, ಕೌಪೀನ, ಕಾವಿಯ ವಸ್ತ್ರ, ಜಡೆ, ಯೋಗ, ಕಮಂಡಲುಗಳಿಂದ ಕೂ

ತ್ವಾಽಥವಾ ಶಿರೋಮುಂಡೀ ಭೂತ್ವಾ ವಸನವರ್ಜಿತ: ॥೩॥ ಅಜಿನಾಸನ
ಯುಕ್ತ: ಸನ್ ಕಾಷಾಯಾಚ್ಛಾದಕಶ್ಚರೇತ್ । ಕೂಷ್ಮಾಂಡಖರ್ಪರಂ ಧೃ
ತ್ವಾ ಭವೇಚ್ಚೈವಂ ದಿಗಂಬರ: ॥ ೪ ॥ ಯದೃಚ್ಛಯಾ ಲಬ್ದಶ್ಚೈವಪ್ರಸಾದಾ
ಸ್ವಾದನೇ ರತ: । ಕಾಯೇನ ವಾಚಾ ಮನಸಾ ತ್ಯಕ್ತಭೂವಿತ್ತಕನ್ಯಕ:
॥ ೫ ॥ ತ್ಯಕ್ತ್ವಾ ಗೃಹಂ ಮಠಾದೀನಿ ಮನುಷ್ಯಾದಿಗೃಹಾಣಿ ಚ । ಪ್ರವಾ
ಸಂ ತೇನ ಕರ್ತವ್ಯಂ ವನೇ ಗಿರಿಗುಹಾದಿಷು ॥ ೬ ॥ ತೃಣೀಕೃತಜಗಜ್ಜೀ
ವೋ ಲೌಕಿಕಾಚಾರವರ್ಜಿತಃ । ತ್ಯಕ್ತಪ್ರವರಗೋತ್ರಶ್ಚ ಸೂತ್ರವರ್ಣಾದಿಕ
ಸ್ತಥಾ ॥ ೭ ॥ ಸ್ವಯಂಭೂಲೀಲಯಾ ಸೋಽಹಂ ಬ್ರಹ್ಮೇತಿ ವಿದಿತಾತ್ಮವಾ
ನ್ । ನಿರ್ನಾಮಾ ವಿಗ್ರಹೋ ಭೂತ್ವಾ ವಧೂಸಂಗವಿವರ್ಜಿತ: ॥ ೮ ॥ ನಿ
ಷ್ಕಾರಣೋ ನಿಷ್ಕಲಂಕೋ ನಿರ್ವಿಕಲ್ಪಶ್ಚ ನಿಷ್ಕ್ರಿಯ: । ನಿಷ್ಪ್ರಪಂಚೋ
ನಿರಾಲಸ್ಯೋ ರಾಗದ್ವೇಷಾದಿವರ್ಜಿತ: ॥ ೯ ॥ ನಿಷಿದ್ಧೇ ವಿಧಿರೂಪೇ ಚ
ಏಕಚಿತ್ತೋ ಭವೇಚ್ಚ ಸ: । ಕರ್ಮಕಾಂಡಿಗೃಹಸ್ಥಾನಾಂ ಮಂದಿರೇಷು

---

ಡಿ, ಇಲ್ಲವೆ ತಲೆ ಮುಂಡಿಸಿ, ನಗ್ನನಾಗಿ ॥ ೪ ॥ ಕೃಷ್ಣಾಜಿನವನ್ನು ಆಸನ
ಮಾಡಿಕೊಂಡು ಕಾವಿಯ ವಸ್ತ್ರ ಹೊದ್ದುಕೊಂಡು ತಿರುಗಾಡಬೇಕು. ಶಿವ
ಸಂಬಂಧಿಯಾದ ಕುಂಬಳ ಸೊಟ್ಟೆಯನ್ನು ಕೈಯಲ್ಲಿ ಹಿಡಿದು ಕೊಂಡು ದಿಗಂ
ಬರನಾಗಿ ಇರ ಬೇಕು. ॥ ೫ ॥ ತಾನಾಗಿ ಶಿಕ್ಕ ಶಿವಪ್ರಸಾದವನ್ನು ಉಣ್ಣ
ಬೇಕು; ತ್ರಿಕರಣ ಪೂರ್ವಕವಾಗಿ ಹೆಣ್ಣು, ಹೊನ್ನು, ಮಣ್ಣನ್ನು ಬಿಟ್ಟಿರ
ಬೇಕು. ॥ ೬ ॥ ತನ್ನ ಮನೆಯನ್ನೂ, ಮಠ ಮೊದಲಾದವುಗಳನ್ನೂ, ಮನುಷ್ಯ
ಮೊದಲಾದವರು ಇರುವ ಮನೆಯನ್ನೂ, ಬಿಟ್ಟು ಅಡವಿಯಲ್ಲಿ ಗುಡ್ಡ ಗವಿ
ಮೊದಲಾದವುಗಳಲ್ಲಿ ಹೋಗಿ ಇರತಕ್ಕದ್ದು. ॥ ೭ ॥ ಈ ಜಗತ್ತಿನೊಳಗೆ ಬ
ದುಕಿ ಇರುವದು ಅಂದರೆ ಹುಲ್ಲಿಗೆ ಸರಿಯಾಗಿ ತಿಳಿದು; ಜನರಲ್ಲಿ ನಡೆಯು
ತ್ತಾ ಇರುವ ಆಚಾರಗಳನ್ನು ಬಿಟ್ಟು; ಗೋತ್ರವನ್ನೂ, ಪ್ರವರಗಳನ್ನೂ, ಅ
ದೇ ಪ್ರಕಾರ ಸೂತ್ರವನ್ನೂ, ಜಾತಿಯನ್ನೂ ತ್ಯಾಗ ಮಾಡಿ; ॥ ೮ ॥ ಸ್ವಯಂ
ಭುವಿನ ಲೀಲೆಯಿಂದ ನಾನೇ ಬ್ರಹ್ಮವು ಎಂದು ಆತ್ಮ ಜ್ಞಾನಿಯಾಗಿ ಹೆಸರು
ಇಲ್ಲದವನಾಗಿ; ಕೇವಲ ದೇಹವಾಗಿ; ಸ್ತ್ರೀಸಂಗವನ್ನು ಬಿಟ್ಟು; ॥ ೯ ॥ ಕಾ
ರಣ, ಕಲಂಕ, ವಿಕಲ್ಪ, ಕರ್ಮ, ಪ್ರಪಂಚ, ಆಲಸ್ಯ, ಪ್ರೀತಿ, ದ್ವೇಷಗಳು
ಇಲ್ಲದವನಾಗಿ; ॥ ೧೦ ॥ ವಿಧಿಯ ಶಾಸ್ತ್ರಗಳನ್ನೂ ನಿಷೇಧದ ಶಾಸ್ತ್ರಗಳನ್ನೂ
ಒಂದೇ ದೃಷ್ಟಿಯಿಂದ ನೋಡುವವನು ಆಗಿ ಇರಬೇಕು. ಕರ್ಮಕಾಂಡವನ್ನು

ಶುಭಾಶುಭೇ ॥ ೧೦ ॥ ವಿವಾಹಾದಿಷು ಕಾರ್ಯೇಷು ಶವಾದಿಸ್ಥಾಪನೇಷು ಚ । ಆಗತ್ವಾ ಚೈಕದಿವಸಂ ಪುರಗ್ರಾಮೇ ವಸೇಚ್ಚ ಸಃ ॥ ೧೧ ॥ ಗೃಹತ್ರಯೇಷ್ವನ್ನಪಾನಂ ಯಾಚಮಾನೋ ಭವೇಚ್ಚ ಸಃ । ದತ್ತಂ ಚೇದಪಿ ಭುಂಜೀತ ನೈ ಅಚೇತ್ಕ್ಲೇಶಂ ನ ಕಾರಯೇತ್ ॥ ೧೨ ॥ ನಾಂದೋಲಿಕಾಂ ರೋಹಯೇತ್ಸ ಅಶ್ವಾರೋಹಣವರ್ಜಿತಃ । ಪಾದಚಾರೀ ಚ ಸಂಭೂಯ ಚರೇದ್ಭೂವಲಯೇ ಸದಾ ॥ ೧೩ ॥ ಅಭಕ್ತಾನಾಂ ಚ ಭಕ್ತಾನಾಂ ಶಿಕ್ಷಾಶಾಪವಿವರ್ಜಿತಃ । ಏಕಭುಕ್ತೋ ಭವೇತ್ಸೋಽಪಿ ಸದಾ ವೈರಾಗ್ಯವಾನ್ ಭವೇತ್ । ಸತೀ ವಿದ್ಯಾ ಸುತಸ್ತೋಷೋ ವಿರಾಗೋ ಬಾಂಧವಃ ಸ್ಮೃತಃ ॥೧೪॥ ಕ್ಷಮೈವ ಪರಿವಾರಸ್ತು ಸಖಾ ಶಾಂತಿರಿತೀರಿತಃ । ಭಕ್ತಿರ್ಮಾತಾ ಸದಾಚಾರಃ ಪಿತಾ ಸತ್ಯಂ ಸುತೋ ಮಮ ॥ ೧೫ ॥ ಸ್ನುಷಾ ಶ್ರದ್ಧೈವ ಸಂಪ್ರೋಕ್ತಾ ನಾಶಾದಾಸಸ್ತಥೈವ ಚ । ಧರ್ಮೋ ವಾಹನಮಿತ್ಯುಕ್ತ ಆಚಾರೋ ದಮ ಏವ ಚ ॥ ೧೬ ॥ ದಾಸೀ ತ್ವಹಿಂಸಾ ಸಂಪ್ರೋಕ್ತಾ ಪೌತ್ರಾ

---

ಅನುಸರಿಸುವ ಗೃಹಸ್ಥರ ಮನೆಯಲ್ಲಿ ॥ ೧೧ ॥ ಲಗ್ನ ಮೊದಲಾದ ಶುಭಕಾರ್ಯಗಳೂ, ಶವಸ್ಥಾಪನ ಮೊದಲಾದ ಅಶುಭ ಕಾರ್ಯಗಳೂ ನಡೆದಾಗ್ಗೆ ಆತನು ಬಂದು ಒಂದು ದಿವಸ ಊರಲ್ಲಿ ಆಗಲಿ ಹಳ್ಳಿಯಲ್ಲಿ ಆಗಲಿ ಇರಬಹುದು. ( ೧೨ ) ಮೂರು ಮನೆಗಳಲ್ಲಿ ಅನ್ನ ಪಾನಗಳನ್ನು ಬೇಡಿಕೊಳ್ಳ ಬೇಕು; ಅವರು ನೀಡಿದರೆ ಉಣ್ಣ ಬೇಕು; ಇಲ್ಲದೆ ಇದ್ದರೆ ಅವರನ್ನು ಪೀಡಿಸಬಾರದು. ॥ ೧೩ ॥ ಆತನು ಪಲ್ಲಕ್ಕಿಯಲ್ಲಿ ಕೂಡ ಬಾರದು; ಕುದುರೆ ಏರುವದನ್ನು ಬಿಟ್ಟು ಬಿಡಬೇಕು; ಭೂಮಂಡಲದಲ್ಲಿ ಕಾಲಿನಿಂದಲೆ ನಡೆಯ ಬೇಕು. ॥ ೧೪ ॥ ಭಕ್ತರು ಎಂದು ಅನಿಸುವವರು ಭಕ್ತಿ ಇಲ್ಲದವರು ಅಗಿದ್ದರೆ ಅವರನ್ನು ಆತನು ಶಿಕ್ಷಿಸಬಾರದು, ಅವರಿಗೆ ಶಾಪ ಕೊಡ ಬಾರದು. ಒಂದು ಹೊತ್ತು ಉಣ್ಣ ಬೇಕು. ಯಾವಾಗಲೂ ವೈರಾಗ್ಯ ಉಳ್ಳವನಾಗಿ ಇರಬೇಕು. ॥ ೧೫ ॥ ಆರು ಸ್ಥಲಗಳನ್ನು ಪಡೆದಿದ್ದು ನಿರಾಲಂಬ ಸ್ಥಿತಿಯನ್ನು ಪಡೆಯಲಿಕ್ಕೆ ಯತ್ನಿಸುತ್ತಾ ಇರ ಬೇಕು. ವಿದ್ಯೆ ಹೆಂಡತಿ ಆಗಿರ ಬೇಕು; ಸಂತೋಷವು ಮಗನು; ವೈರಾಗ್ಯವು ಬಾಂಧವನು; ॥ ೧೬ ॥ ಕ್ಷಮೆಯೇ ಪರಿವಾರವು; ಶಾಂತಿಯು ಗೆಳೆಯನು; ಭಕ್ತಿಯು ತಾಯಿ; ಸದಾಚಾರವು ತಂದೆ; ಸತ್ಯವು ಪುತ್ರನು ನನ್ನಲ್ಲಿ ॥ ೧೭ ॥ ವಿಶ್ವಾಸವೇ ತಂಗಿ; ಅನಾಶೆಯೇ ದಾಸನು; ಧರ್ಮವು ವಾಹನವು; ಇಂದ್ರಿಯ ದಮನವೇ ಆಚಾರವು; ॥ ೧೮ ॥ ಅಹಿಂಸೆ ದಾಸಿ; ಮೈತ್ರಿ ಮೊದಲಾದ ಸದ್ಗುಣಗಳೇ ಮೊಮ್ಮಕ್ಕಳು; ಜ್ಞಾನವೇ ಶರೀರ

ಮೈತ್ರ್ಯಾದಿಸದ್ಗುಣಾ: । ಜ್ಞಾನಮೇವ ಶರೀರಂ ಸ್ಯಾದ್ ವಿಚಾರ: ಕ್ಷೇತ್ರ ಮೇವ ಚ ॥ ೧೮ ॥ ಮುಕ್ತಿರೇವ ವರೋ ದೇಶ ಇತಿ ನಿಶ್ಚಿತಧೀ: ಸದಾ । ಕಂಥಾ ಕಮಂಡಲುಶ್ಚೈವ ದಂಡೋ ವೈ ಭೈಕ್ಷಪಾತ್ರಕಮ್ ॥ ೧೯ ॥ ಭಸ್ಮಪಾತ್ರಂ ಚ ಪಂಚೈತಾನ್ ಬಾಹ್ಯಮುದ್ರಾಶ್ಚ ಧಾರಯೇತ್ । ತತ್ತನ್ಮಂತ್ರಾನುಸಾರೇಣ ಧೃತ್ವಾ ತು ತದನಂತರಮ್ ॥ ೨೦॥ ತದನ್ಯಾ: ಪಂಚಮುದ್ರಾಸ್ತ್ವಂ ಹ್ಯಂತರಂಗೇ ತು ಧಾರಯೇತ್ । ಸಮತೈವ ಚ ಕಂಥಾಸ್ಯಾದ್ದಂಡೋ ಜ್ಞಾನಂ ತಥೈವ ಚ ॥ ೨೧ ॥ ಕಮಂಡಲು ದಯೈವಾಸೀದ್ ವೈರಾಗ್ಯಂ ಭೈಕ್ಷಪಾತ್ರಕಮ್ । ಕ್ಷಮೈವ ಭಸ್ಮಘುಟಕಾಮೇವಂ ಚಾಂತೇಽಪಿ ಧಾರಯೇತ್ ॥ ೨೨ ॥ ಏವಂ ವಿಧಾನ್ ಶೈವವೇಷಾನ್ ಹ್ಯಂಗೀಕೃತ್ಯ ಸದಾ ಚರೇತ್ । ಶಿವಾರ್ಚನಂ ತ್ರಿಪುಂಡ್ರಾಣಾಂ ಧಾರಣಂ ಭಸ್ಮಧೂಲನಮ್ ॥ ೨೩ ॥ ಶಿವಮಂತ್ರಜಪಶ್ಚೈವ ಶಿವಧ್ಯಾನಪರಾಯಣ: । ಸದಾ ಲಿಂಗಾಂಗಸಂಯೋಗಕ್ರಿಯಾಜ್ಞಾನಾದಿಸಂಯುತಃ ॥ ೨೪ ॥ ರಸಾಯನಾದ್ಯಕೃತ್ವಾ ತು ತಥಾ ವೈ ಕ್ರಯವಿಕ್ರಯಮ್ । ವೈದ್ಯಂ ವಶ್ಯಂ ಜ್ಯೋತಿಷಂ

---

ವು; ವಿಚಾರವೇ ಕ್ಷೇತ್ರವು; ॥ ೧೮ ॥ ಮುಕ್ತಿಯೇ ಮೇಲಾದ ದೇಶವು; ಈ ಪ್ರಕಾರ ಬುದ್ಧಿಯಲ್ಲಿ ನಿಶ್ಚವು ಆಗಿರ ಬೇಕು. ಮಹಾಲಿಂಗ ಕಪನಿ, ಕಮಂಡಲು, ದಂಡ, ಭಿಕ್ಷಾಪಾತ್ರೆ, ॥ ೨೦ ॥ ಭಸ್ಮಪಾತ್ರೆ, ಈ ಐದು ಹೊರಗಿನ ಮುದ್ರೆಗಳನ್ನು ಧರಿಸಿರ ಬೇಕು. ಇವುಗಳನ್ನು ಆಯಾ ಮಂತ್ರಗಳಿಗೆ ಅನುಸರಿಸಿ ಧರಿಸಿದ ನಂತರ ॥ ೨೧ ॥ ಇವುಗಳಿಂದ ಬೇರೆ ಆದ ಐದು ಮುದ್ರೆಗಳನ್ನು ಅಂತರಂಗದಲ್ಲಿ ಧರಿಸ ಬೇಕು. ಸಮತೆಯೇ, ಕಂಥೆ, ಜ್ಞಾನವೇ ದಂಡವು, ಅದೇ ಪ್ರಕಾರ ॥ ೨೨ ॥ ದಯೆ ಕಮಂಡಲು, ವೈರಾಗ್ಯವೇ ಭಿಕ್ಷಾಪಾತ್ರೆಯು, ಕ್ಷಮೆಯೇ ಭಸ್ಮಘುಟಿಕೆ, ಈ ಪ್ರಕಾರ ಅಂತರಂಗದಲ್ಲಿಯೂ ಧರಿಸಿರ ಬೇಕು. ॥ ೨೩ ॥ ಈ ವಿಧವಾದ ಶೈವ ವೇಷಗಳನ್ನು ಕೈಕೊಂಡು ಯಾವಾಗಲೂ ಸಂಚಾರ ಮಾಡ ಬೇಕು. ಶಿವನ ಪೂಜೆ ಮಾಡುತ್ತಾ ಇರ ಬೇಕು; ತ್ರಿಪುಂಡ್ರಗಳನ್ನು ( ವಿಭೂತಿಯ ಪಟ್ಟೆಗಳನ್ನು ) ಹಣೆಯು ಮೇಲೆ ಹಚ್ಚ ಬೇಕು. ಮೈಗೆ ಭಸ್ಮ ಹಚ್ಚಿ ಕೊಳ್ಳ ಬೇಕು. ॥ ೨೪ ॥ ಶಿವಮಂತ್ರವನ್ನು ಜಪಿಸುತ್ತಾ ಇರ ಬೇಕು. ಶಿವನ ಧ್ಯಾನದಲ್ಲಿ ತತ್ಪರನು ಆಗಿರ ಬೇಕು. ಯಾವಾಗಲೂ ಲಿಂಗವನ್ನು ಧರಿಸಿ ಇರ ಬೇಕು. ಶಾಸ್ತ್ರೋಕ್ತ ಆಚಾರ ಮತ್ತು ಜ್ಞಾನಗಳಿಂದ ಕೂಡಿ ಇರ ಬೇಕು. ॥೨೫ ॥ ರಸಾಯನ ಮೊದಲಾದವುಗಳನ್ನು ಮಾಡ ಬಾರದು. ಅದರಂತೆ ಮಾರಲಿಕ್ಕೆ ಕೊಡುವದು ತಕ್ಕೊಳ್ಳುವದು ಮಾಡ ಬಾರದು.

ಚ ವ್ಯವಹಾರಾಂಶ್ಚ ಲೌಕಿಕಾನ್ ॥ ೨೫ ॥ ವಿಷಯಾದೀನ್ ಪರಿತ್ಯಜ್ಯಾ‌ದೌ ವಿರಕ್ತಃ ಸ್ಯಾದನಂತರಂ । ಭವಾಖ್ಯಾರಣ್ಯಮಧ್ಯಸ್ಥಲೋಭಪಂಕಂ ಪರಿತ್ಯಜೇತ್ ॥ ೨೬ ॥

ಶುದ್ಧವೀರಶಿವಾಚಾರ್ಯಾಃ ಪಂಚಮುದ್ರಾನ್ವಿತಾ ಭುವಿ ॥೫॥ ಸಂಚಾರಂ ಸ್ವೇಚ ಯಾ ಕುರ್ಯುರ್ಭಕ್ತೈರ್ವಂದ್ಯಾಶ್ಚ ಸರ್ವಶಃ । ದೈವಾದಾಗಚ್ಛತಾಂ ಪುಂಸಾಮುಪದೇಶಃ ಕೃತೋ ಭವೇತ್ ॥ ೬ ॥ ಜ್ಞಾನೋಪದೇಶಃ ಕರ್ತವ್ಯೋ ನ ಚ ಕ್ರಿಯೋಪದೇಶಕೃತ್ । ನಿರಾಭಾರಾ ವೀರಶೈವಾ ಸರ್ವೇ ವಂದ್ಯಾ ನ ಸಂಶಯಃ॥೭॥ದಂಡಖಂಡನಕರ್ತೃತ್ವಂ ತೇಷಾಂ ನಾಸ್ತಿ ಕದಾಚನ॥

॥ ಸಿದ್ಧಾಂತಶಿಖಾಮಣೌ ॥

ತದ್ಧರ್ಮಾಚಾರಂ ವಿರಕ್ತೋಽಪಿ ನ ತ್ಯಜೇದಿತ್ಯಾಹ

ಧರ್ಮ ಏವ ಸಮಸ್ತಾನಾಂ ಯತಸ್ಸಂಸಿದ್ಧಿಕಾರಣಮ್ । ನಿಸ್ಪೃಹೋಽಪಿ ಮಹಾಯೋಗೀ ಧರ್ಮಮಾರ್ಗಂ ಚ ನ ತ್ಯಜೇತ್ ॥ ೧ ॥

---

ವೈದ್ಯವನ್ನೂ ವಶ್ಯವನ್ನೂ (ಸ್ತ್ರೀವಶ ಮುಂತಾದ್ದನ್ನು), ಜ್ಯೋತಿಷವನ್ನೂ (ಗ್ರಹಬಲ ಹೇಳುವದನ್ನು), ಜನರಲ್ಲಿ ನಡೆಯುವ ಬೇರೆ ವ್ಯವಹಾರಗಳನ್ನೂ, ಮಾಡ ಬಾರದು. ॥ ೨೬ ॥ ವಿಷಯದ ಇಚ್ಛೆಯನ್ನು ಮೊದಲು ತ್ಯಾಗ ಮಾಡಿ ಆ ಮೇಲೆ ವಿರಕ್ತನು ಆಗ ಬೇಕು. ಈ ಸಂಸಾರವೆಂಬ ಅಡವಿಯ ನಡುವೆ ಇರುವ ಲೋಭವೆಂಬ ಕೆಸರನ್ನು ಬಿಟ್ಟಿರ ಬೇಕು.

ಶುದ್ಧರಾದಂಥ ವೀರಶಿವಾಚಾರ್ಯರು ಐದು ಮುದ್ರೆಗಳಿಂದ ಕೂಡಿ ॥೬॥ ಭಕ್ತರಿಗೆ ಎಲ್ಲ ರೀತಿಯಿಂದಲೂ ವಂದ್ಯರಾಗಿ, ಭೂಮಿಯಲ್ಲಿ ಮನಸಿಗೆ ಬಂದತ್ತ ಸಂಚಾರ ಮಾಡ ಬೇಕು. ದೈವವಶದಿಂದ ಯಾವನಾದರೂ ಶಿಷ್ಯನಾಗಲಿಕ್ಕೆ ಬಂದರೆ ಆತನಿಗೆ ಉಪದೇಶವನ್ನು ಮಾಡ ಬೇಕು. ॥ ೭ ॥ ಜ್ಞಾನೋಪದೇಶವನ್ನೇ ಮಾಡ ಬೇಕು; ಅಲ್ಲದೆ ಕ್ರಿಯೋಪದೇಶವನ್ನು ಮಾಡ ಬಾರದು. ನಿರಾಭಾರರಾದ ವೀರಶೈವರು ಎಲ್ಲರು ನಿಸ್ಸಂಶಯವಾಗಿ ವಂದ್ಯರು ಆಗಿರುತ್ತಾರೆ. ॥೮॥ ಅವರಿಗೆ ದಂಡ ಖಂಡನದ ಅಧಿಕಾರವು ಎಂದಿಗೂ ಇಲ್ಲ.

॥ ಸಿದ್ಧಾಂತಶಿಖಾಮಣಿಯಲ್ಲಿ. ॥

ಆದದ್ದರಿಂದ ವಿರಕ್ತನಾದಾಗ್ಯೂ ಧರ್ಮಾಚಾರವನ್ನು ಬಿಡ ಕೂಡದು ಎಂದು ಹೇಳುತ್ತಾನೆ.

॥ ೧ ॥ ಎಲ್ಲರಿಗೂ ಧರ್ಮವೇ ಬಯಸಿದ ಕೋರಿಕೆ ಕೈಗೂಡಲಿಕ್ಕೆ ಕಾರಣವು ಆಗಿರುವದರಿಂದ ನಿಸ್ಪೃಹನೂ ಮಹಾಯೋಗಿಯೂ ಆದಾಗ್ಯೂ ಯಾವಾತನಾದರೂ ಧರ್ಮ ಮಾರ್ಗವನ್ನು ಬಿಡ ಬಾರದು.

ನನು ಜ್ಞಾನಿನಾಂ ಕಿಂ ಧರ್ಮಾಚರಣೇನೇತ್ಯತ್ರಾಹ

ಜ್ಞಾನಾಮೃತೇನ ತೃಪ್ತೋಽಪಿ ಯೋಗೀ ಧರ್ಮಂ ನ ಸಂತ್ಯಜೇತ್ । ಆಚಾರಂ ಮಹತಾಂ ದೃಷ್ಟ್ವಾ ಪ್ರವರ್ತಂತೇ ಹಿ ಲೌಕಿಕಾಃ ॥ ೨ ॥

ಸೂಕ್ಷ್ಮಾಗಮೇ ಪಟಲೇ ೧೨

ಪ್ರಭೋರ್ಹಸ್ತಾಬ್ಜಜಾತಾನಾಂ ಚರಾಣಾಂ ಲಕ್ಷಣಂ ಶೃಣು। ಕಲಶೋ ವಜ್ರರೂಪಸ್ತು ಗೋಪ್ಯಾನನಸಮುದ್ಭವಃ ॥೧॥ ಮೂಲಪ್ರಣವಸಂಯುಕ್ತೋ ಗಂಗಾತೋಯಪ್ರಪೂರಿತಃ । ಜಟಿನೋ ಮುಂಡಿನೋ ವಾಪಿ ಶಿಖಿನೋ ವಾಪಿ ಸಂತತಮ್ ॥೨॥ ಭಿಕ್ಷಾಶಿನೋ ಭಯಾತೀತಾಃ ಕಾಷಾಯವಸನಾನ್ವಿತಾಃ । ನಿಷ್ಕಾಮಾ ನಿರಹಂಕಾರಾ ನಿರುತ್ಸೇಕಾ ನಿರಾಮಯಾಃ ॥ ೩ ॥ ನಿಸ್ಪೃಹಾ ನಿಜಲಿಂಗೈಕ್ಯಾ ನಿರಪೇಕ್ಷಾ ನಿರಾಕುಲಾಃ । ಸರ್ವಭೂತದಯಾಯುಕ್ತಾ ನಿರಾಭಾರಾ ಇತಿ ಸ್ಮೃತಾಃ ॥ ೪ ॥

ಪರಮೇಶ್ವರಾಗಮೇ ಪಟಲೇ ೮

---

ಜ್ಞಾನಿಗಳಾದವರಿಗೆ ಧರ್ಮಾಚರಣದಿಂದ ಏನು ಪ್ರಯೋಜನವು ಎಂದರೆ:—

॥ ೨ ॥ ಯೋಗಿಯು, ಜ್ಞಾನವು ಎಂಬ ಅಮೃತವನ್ನು ಉಂಡು ತೃಪ್ತನು ಆದಾಗ್ಯೂ ಧರ್ಮವನ್ನು ಬಿಡ ಬಾರದು; ಯಾಕಂದರೆ ದೊಡ್ಡವರ ಆಚರಣವನ್ನು ನೋಡಿ ಅದರಂತೆ ಲೌಕಿಕರು ನಡೆಯುತ್ತಾರೆ.

ಸೂಕ್ಷ್ಮಾಗಮ ಪಟಲ ೧೨

॥ ೧ ॥ ಪ್ರಭುವಿನ ಕೈ ಎಂಬ ಕಮಲದಲ್ಲಿ ಹುಟ್ಟಿದ ಚರಮೂರ್ತಿಗಳ ಲಕ್ಷಣವನ್ನು ಕೇಳು. ಗೋಪ್ಯಮುಖದಿಂದ ಹುಟ್ಟಿದಂಥಾದೂ, ॥ ೨ ॥ ವಜ್ರರೂಪವಾದದ್ದೂ, ಮೂಲ ಓಂಕಾರದಿಂದ ಕೂಡಿದ್ದೂ, ಗಂಗಾಜಲದಿಂದ ತುಂಬಿದ್ದೂ, ಇಂಥಾದ್ದು ಒಂದು ಕಲಶವು ಅವರ ಹತ್ತರ ಇರ ಬೇಕು. ಆವರು ಯಾವಾಗಲೂ ಜಡೆ ಇಲ್ಲವೆ ಚಂಡಿಕೆ ಬಿಟ್ಟು ಇರ ಬೇಕು, ಇಲ್ಲವೆ ತಲೆ ಮುಂಡಿಸಿ ಇರ ಬೇಕು. ॥ ೩ ॥ ಭಿಕ್ಷೆ ಬೇಡಿ ಉಣ್ಣುತ್ತಾ ಇರ ಬೇಕು, ನಿರ್ಭಯರು ಆಗಿರ ಬೇಕು, ಕಾವಿಯ ವಸ್ತ್ರವನ್ನು ಧರಿಸಿ ಇರ ಬೇಕು. ನಿರಿಚ್ಛರೂ, ನಿರಹಂಕಾರಿಗಳೂ, ಸೊಕ್ಕು ಇಲ್ಲದವರೂ, ಕಲಂಕವು ಇಲ್ಲದವರೂ, ॥ ೪ ॥ ನಿಸ್ಪೃಹರೂ, ನಿಜಲಿಂಗದಲ್ಲಿ ಐಕ್ಯ ಹೊಂದಿದವರೂ, ನಿರಪೇಕ್ಷರೂ, ತೊಂದರೆಯಲ್ಲಿ ಬೀಳದವರೂ ಎಲ್ಲ ಪ್ರಾಣಿಗಳಲ್ಲಿ ದಯೆ ಉಳ್ಳವರೂ ನಿರಾಭಾರರೆಂದು ಅನಿಸುತ್ತಾರೆ.

ಪರಮೇಶ್ವರಾಗಮ ಪಟಲ ೮

ಧೃತ್ವಾ ಕಾಷಾಯವಸನಂ ಭಿಕ್ಷಾಟನಪರಾಃ ಸದಾ । ಶಿವಧ್ಯಾನರತಾಃ ಶುದ್ಧಾ ವೀರಶೈವಾ ಹಿ ತೇ ಸದಾ ॥ ೧೬ ॥ ವೀರಶೈವವ್ರತಸ್ಥಸ್ಯ ನಾನ್ಯತ್ ಕಾರ್ಯಂ ಹಿ ವಿದ್ಯತೇ । ಮಮ ಪೂಜಾಂ ವಿನಾ ಧ್ಯಾನಂ ಸ್ಮರಣಂ ಕೀರ್ತನಂ ವಿನಾ ॥ ೧೭ ॥

ಪರಮೇಶ್ವರಾಗಮೇ ಪಟಲೇ ೮

ವಿಶುದ್ಧಭಕ್ತಾ ಮಯಿ ಯೇ ಯೇ ಚ ವೈಕಾಂತಸೇವಿನಃ । ಮಮ ಧ್ಯಾನರತಾ ನಿತ್ಯಂ ವೀರಾಸ್ತೇ ಶಿವಯೋಗಿನಃ ॥ ೯ ॥ ಸ್ಮರಣಂ ಕೀರ್ತನಂ ಕೇಲಿಃ ಪ್ರೇಕ್ಷಣಂ ಗುಹ್ಯಭಾಷಣಮ್ । ಸಂಕಲ್ಪೋಽಧ್ಯವಸಾಯಶ್ಚ ಕ್ರಿಯಾನಿರ್ವೃತ್ತಿರೇವ ಚ ॥೧೦॥ ಏತನ್ಮೈಥುನಮಷ್ಟಾಂಗಂ ಪ್ರವದಂತಿ ಮನೀಷಿಣಃ । ವಿಪರೀತಂ ಬ್ರಹ್ಮಚರ್ಯಮೇತದೇವಾಷ್ಟಲಕ್ಷಣಮ್ ॥೧೧ ॥ ತದುಕ್ತಲಕ್ಷಣಬ್ರಹ್ಮಚರ್ಯವ್ರತಪರಾ ಹಿ ಯೇ । ಯೋಗಿನೋ ಯೇ ಮಹಾತ್ಮಾನಸ್ತೇ ವೀರಾಃ ಶಿವಯೋಗಿನಃ ॥ ೧೨ ॥

ಪರಮೇಶ್ವರಾಗಮೇ ಪಟಲೇ ೮

---

॥೧೬॥ ಕಾವಿಯ ವಸ್ತ್ರವನ್ನು ಧರಿಸಿ ಭಿಕ್ಷೆಗಾಗಿ ತತ್ಪರತೆಯಿಂದ ಯಾವಾಗಲೂ ತಿರುಗುತ್ತ ಶಿವಧ್ಯಾನದಲ್ಲಿ ಆಸಕ್ತರಾಗಿಯೂ ಶುದ್ಧರಾಗಿಯೂ ಇರುವವರೇ ವೀರಶೈವರು. ॥ ೧೭ ॥ ವೀರಶೈವವ್ರತವನ್ನು ಕೈಕೊಂಡವನಿಗೆ, ನನ್ನ ಪೂಜೆ, ಧ್ಯಾನ, ಸ್ಮರಣ, ಕೀರ್ತನಗಳನ್ನು ಬಿಟ್ಟು ಬೇರೆ ಏನೂ ಮಾಡಬೇಕಾಗಿಲ್ಲ.

ಪರಮೇಶ್ವರಾಗಮ ಪಟಲ ೮

॥೯॥ ಯಾವ ಶಿವಯೋಗಿಗಳು ನನ್ನಲ್ಲಿ ಶುದ್ಧವಾದ ಭಕ್ತಿಯುಳ್ಳವರು ಇಲ್ಲವೇ ಕೇವಲ ನನ್ನನ್ನೇ ಸೇವಿಸುವಂಥವರು ಮತ್ತು ಯಾವಾಗಲೂ ನನ್ನ ಧ್ಯಾನದಲ್ಲಿ ಆಸಕ್ತರಾದವರು ಆಗಿರುತ್ತಾರೋ ಅವರು ವೀರರು. ॥ ೧೦ ॥ ಸ್ಮರಣ, ಕೀರ್ತನ, ಆಟ, ನೋಟ, ಗೂಢವಾದ ಸಂಭಾಷಣ, ಸಂಕಲ್ಪ, ಮನಸ್ಸಿನ ದೃಢನಿಶ್ಚಯ, ಹಿಡಿದ ಕೆಲಸವನ್ನು ಕೊನೆಗಾಣಿಸೋಣ ॥ ೧೧ ॥ ಇವುಗಳಿಗೆಲ್ಲ ಕೂಡಿ ಪಂಡಿತರು ಅಷ್ಟಾಂಗಮೈಥುನ ಅನ್ನುತ್ತಾರೆ; ಈ ಎಂಟು ಲಕ್ಷಣಗಳು ಉಳ್ಳದ್ದೇ ವಿಪರೀತ ಬ್ರಹ್ಮಚರ್ಯವು. ॥ ೧೧ ॥ ಆದದ್ದರಿಂದ ಮೇಲೆ ಹೇಳಿದ ಲಕ್ಷಣಗಳು ಉಳ್ಳ ಬ್ರಹ್ಮಚರ್ಯದಲ್ಲಿ ತತ್ಪರರಾದಂಥ ಮಹಾತ್ಮರಾದ ಯೋಗಿಗಳೇ ವೀರರಾದ ಶಿವಯೋಗಿಗಳು.

ಪರಮೇಶ್ವರಾಗಮ ಪಟಲ ೮

ಯದಿ ಭಿಕ್ಷಾಟನೇಚ್ಛಾಸ್ತೀ ತದಾ ಭಿಕ್ಷಾಟನಂ ಚರೇತ್ । ನ ಕರ್ತವ್ಯಸ್ತ್ವನಿಯಮೋ ಸಾಧನಂ ಜ್ಞಾನಮೇವ ಹಿ ॥ ೨೯ ॥

ಪರಮೇಶ್ವರಾಗಮೇ ಪಟಲೇ ೮

ತ್ರಿಕಾಲಮರ್ಚಯೇಲ್ಲಿಂಗಂ ವಿಹರೇತ ಯಥಾ ಸುಖಮ್ । ವಿಷಯೇಂದ್ರಿಯ ಸಂಯೋಗಂ ನೈರಂತರ್ಯೇಣ ಯಾವತಾ ॥ ೩೬॥ ಯತ್ನೇನ ಯತತೇ ಲಿಂಗೀ ತಾವಲ್ಲಘು ಸುಖಂ ವ್ರಜೇತ್ ।

ಪರಮೇಶ್ವರಾಗಮೇ ಪಟಲೇ ೮

ವೀರಶೈವಮತಸ್ಥಂ ಯಃ ಪೂಜಯೇಚ್ಛಿವರೂಪಿಣಮ್ ॥ ೩೯ ॥ ನಿಸ್ತಾರಯತಿ ದಾತಾರಂ ದಶಪೂರ್ವಾನ್ ದಶಾಪರಾನ್ । ಯಸ್ತಿರಸ್ಕುರುತೇ ಮೂಢಃ ಶಿವಲಿಂಗಿನಮೀಶ್ವರಿ ॥ ೪೦ ॥ ಸ ಕೋಟಿಕುಲಸಂಯುಕ್ತೋ ರೌರವೇ ನರಕೇ ಪತೇತ್ । ತದೇತತ್ ಕಥಿತಂ ದೇವಿ ವೀರಶೈವಸ್ಯ ಲಕ್ಷಣಮ್ ॥ ೪೧ ॥

ಪರಮೇಶ್ವರಾಗಮೇ ಪಟಲೇ ೯

---

॥ ೨೯ ॥ ಭಿಕ್ಷೆಗಾಗಿ ತಿರುಗುವ ಇಚ್ಛೆ ಇದ್ದರೆ ತಿರುಗ ಬೇಕು; ಅನಿಯಮವನ್ನು ಮಾಡ ಬಾರದು; ಯಾಕಂದರೆ ಜ್ಞಾನವೇ ಸಾಧನವು ಆಗಿರುತ್ತದೆ.

ಪರಮೇಶ್ವರಾಗಮ ಪಟಲ ೮

॥ ೩೬ ॥ ಮೂರು ಕಾಲದಲ್ಲಿಯೂ ಲಿಂಗವನ್ನು ಪೂಜಿಸಿ ಸುಖದಿಂದ ತಿರುಗಾಡ ಬಹುದು. ಇಂದ್ರಿಯಗಳನ್ನು ವಿಷಯಗಳ ಕಡೆಗೆ ಹೋಗ ಗೊಡದೆ ಇರುವಲ್ಲಿ ನಿರಂತರವಾಗಿ, ಲಿಂಗಧಾರಿಯು ಎಷ್ಟು ॥ ೩೭ ॥ ಯತ್ನವನ್ನು ಮಾಡುತ್ತಾನೋ ಅಷ್ಟು ತೀವ್ರ ಸುಖವನ್ನು ಪಡೆಯುತ್ತಾನೆ.

ಪರಮೇಶ್ವರಾಗಮ ಪಟಲ ೮

॥ ೩೯ ॥ ಶಿವರೂಪಿಯಾದ ವೀರಶೈವಮತದವನನ್ನು ಯಾವನಾದರೂ ಪೂಜಿಸಿದರೆ ॥ ೪೦ ॥ ಆ ದಾನ ಮಾಡುವವನನ್ನೂ, ಆತನ ಹತ್ತು ಜನ ಪೂರ್ವಜರನ್ನೂ, ಮುಂದೆ ಹತ್ತು ತಲೆಯವರನ್ನೂ ಆತನು ಮುಕ್ತರನ್ನಾಗಿ ಮಾಡುತ್ತಾನೆ. ಶಿವಲಿಂಗವನ್ನು ಧಾರಣ ಮಾಡಿದವನನ್ನು ಯಾವ ಮೂಢನು ತಿರಸ್ಕರಿಸುತ್ತಾನೋ ॥ ೪೧ ॥ ಆತನು ಕೋಟಿ ಕುಲದೊಡನೆ ರೌರವನರಕದಲ್ಲಿ ಬೀಳುವನು. ದೇವಿಯೇ, ಈ ಪ್ರಕಾರ ವೀರಶೈವನ ಲಕ್ಷಣವನ್ನು ಹೇಳಿ ಆಯಿತು.

ಪರಮೇಶ್ವರಾಗಮ ಪಟಲ ೯

ತ್ರಿಕಾಲಂ ಭಸ್ಮನಾ ಸ್ನಾನಂ ಶಕ್ತಿತೋ ಲಿಂಗಪೂಜನಮ್ । ಭೈಕ್ಷಂ ಚ ಶಿವಭಕ್ತೇಷು ವೀರಶೈವಸ್ಯ ಲಕ್ಷಣಮ್ ॥ ೪೩ ॥ ಸ್ಮರಣಂ ಪೂಜನಂ ಧ್ಯಾನಂ ತತ್ಕಥಾಸ್ತೋತ್ರಮನ್ವಹಮ್ । ಶಂಕರಸ್ಯ ಮಮೇಶಸ್ಯ ವೀರಶೈವಸ್ಯ ಲಕ್ಷಣಮ್ ॥ ೪೪ ॥

ಪರಮೇಶ್ವರಾಗಮೇ ಪಟಲೇ ೯

ಮೌನಮೇಕಾಂತವಾಸಶ್ಚ ಮಚ್ಛಾಸ್ತ್ರಸ್ಯಾವಲೋಕನಮ್ । ವಿರಕ್ತಿರ್ವಿಷಯಗ್ರಾಮೇ ವೀರಶೈವಸ್ಯ ಲಕ್ಷಣಮ್ ॥ ೪೬ ॥

ಪರಮೇಶ್ವರಾಗಮೇ ಪಟಲೇ ೯

ಗುರುಶುಶ್ರೂಷಣಂ ಶಾಸ್ತ್ರಚಿಂತನಂ ತದನುಷ್ಠಿಭಿಃ । ಶಾಂತಿರೇಕಾಂತವಾಸಶ್ಚ ಭಕ್ತಿರ್ದೇವಿ ಶಿವೇ ಮಯಿ ॥೪೯॥ ಪೂಜನಂ ಸರ್ವದಾ ಲಿಂಗೇ ವೀರಶೈವೋಪಸರ್ಪಣಮ್ । ಮತ್ಪದಪ್ರಾಪ್ತಯೇ ಚೈತತ್ ಸೋಪಾನಪಥಮುಚ್ಯತೇ ॥ ೫೦ ॥

ಪರಮೇಶ್ವರಾಗಮೇ ಪಟಲೇ ೧೫

ಅಥಾಧಿಕಾರೀ ಗಚ್ಛೇತ ಮತಂ ಮಮ ಮಹತ್ತರಮ್ । ತುರ್ಯವೀರ

॥ ೪೩ ॥ ಮೂರು ಹೊತ್ತಿನಲ್ಲಿಯೂ ಭಸ್ಮಸ್ನಾನವು, ಶಕ್ತಿ ಇದ್ದ ಮಟ್ಟಿಗೆ ಲಿಂಗಪೂಜೆ, ಶಿವಭಕ್ತರಲ್ಲಿ ಭಿಕ್ಷೆ, ಇವು ವೀರಶೈವನ ಲಕ್ಷಣಗಳು. ॥೪೪॥ ಪ್ರತಿದಿನದಲ್ಲಿಯೂ ಒಡೆಯನಾದ ಶಂಕರನ ಅಂದರೆ ನನ್ನ ಸ್ಮರಣೆ, ಪೂಜೆ, ಧ್ಯಾನ, ಕಥೆ, ಸ್ತೋತ್ರಗಳು ನಡೆದಿರುವದು ವೀರಶೈವನ ಲಕ್ಷಣವು.

ಪರಮೇಶ್ವರಾಗಮ ಪಟಲ ೯

॥ ೪೬ ॥ ಮೌನವು, ಏಕಾಂತವಾಸವು, ನನ್ನ ಸಂಬಂಧ ಇರುವ ಶಾಸ್ತ್ರಗಳನ್ನು ನೋಡುವದು, ವಿಷಯಗಳಲ್ಲಿ ವಿರಕ್ತಿ ಇವು ವೀರಶೈವನ ಲಕ್ಷಣಗಳು.

ಪರಮೇಶ್ವರಾಗಮ ಪಟಲ ೯

॥ ೪೯ ॥ ಗುರುವಿನ ಸೇವೆ, ಅದನ್ನು ಮಾಡುವವರಿಂದ ಶಾಸ್ತ್ರಚಿಂತನವು, ಶಾಂತಿ, ಏಕಾಂತವಾಸ, ಶಿವನಾದ ನನ್ನ ಭಕ್ತಿ, ॥ ೫೦ ॥ ಯಾವಾಗಲೂ ಲಿಂಗಪೂಜೆ, ವೀರಶೈವರ ಬಳಿಗೆ ಭಿಕ್ಷೆಗಾಗಿ ಹೋಗೋಣ, ಇವು ನನ್ನ ಪದವನ್ನು ಪಡೆಯುವದಕ್ಕೆ ಪಾವಟಿಗೆಗಳು ಅನಿಸುತ್ತವೆ.

ಪರಮೇಶ್ವರಾಗಮ ಪಟಲ ೧೫

॥ ೫೫ ॥ ಅಧಿಕಾರಿಯಾದವನು ಬಹು ದೊಡ್ಡದಾದ ನಾಲ್ಕನೆಯ ನಿರಾಭಾರಿ ವೀರಮಹಾಶೈವವೆಂಬ ನನ್ನ ಮತವನ್ನು ಸ್ವೀಕರಿಸಿದರೆ ಆತನು ಬಹು

ಮಹಾಶೈವಮಪ್ರಮತ್ತೋ ವಸೇತ್ ತದಾ ॥ ೫೫ ॥

ಪರಮೇಶ್ವರಾಗಮೇ ಪಟಲೇ ೧೫

ತುರ್ಯವೀರಮತಾವಿಷ್ಟೋ ನಿವಸೇದೇವಮೀಶ್ವರಿ । ಅನ್ಯಥಾ ಭ್ರಂಶತೇ ಭೂಯೋऽಪ್ಯಧಃಕೂಪೇ ನ ಸಂಶಯಃ ॥ ೭೪ ॥

ಪರಮೇಶ್ವರಾಗಮೇ ಪಟಲೇ ೧೬

ಅಜ್ಞಾತ್ವೈತನ್ಮಹಾಶಾಸ್ತ್ರರಹಸ್ಯಂ ಶ್ರೀಗುರೋರ್ಮುಖಾತ್ । ಅಬೋಧಯಿತ್ವಾ ಶಿಷ್ಯಂ ಯೋ ಭ್ರಷ್ಟೌ ತಾವುಭೌ ಶಿವೇ ॥ ೭೫ ॥

ಸುಪ್ರಭೇದಾಗಮೇ

ಉಪಚಾರೈಃ ಷೋಡಶಭಿಃ ಪೂಜಿತಸ್ತೋಷವರ್ಜಿತಃ । ಅಪೂಜಿತಶ್ಚೇನ್ನೋ ದುಃಖೀ ಭವೇದೇಕಪ್ರಕಾರವಾನ್ ॥೨೭॥ ಶೀತೋಷ್ಣಯೋಃ ಸುಖೇ ದುಃಖೇ ಶಿಲಾವಿಗ್ರಹವದ್ಭವೇತ್ ।

ಸುಪ್ರಭೇದಾಗಮೇ

ಮದೂರ್ಧ್ವಮುಖಸಂಜಾತೋ ನಿರಂಜನಗಣೇಶ್ವರಃ । ಪೂರ್ವಪೀಠಾಧಿ

---

೪ ಎಚ್ಚರದಿಂದ ಇರ ಬೇಕು.

ಪರಮೇಶ್ವರಾಗಮ ಪಟಲ ೧೫

॥ ೭೪ ॥ ಪಾರ್ವತೀ, ತುರ್ಯ ಅಂದರೆ ನಾಲ್ಕನೆಯ ವೀರಮತಸ್ಥನು ಈ ಪ್ರಕಾರ ಇರ ಬೇಕು; ಹೀಗೆ ಇರದೆ ಇದ್ದರೆ ಬಹು ದಿವಸದ ವರೆಗೆ ನರಕದಲ್ಲಿ ಬೀಳುತ್ತಾನೆ.

ಪರಮೇಶ್ವರಾಗಮ ಪಟಲ ೧೬

॥ ೭೫ ॥ ಪಾರ್ವತೀ, ಈ ಮಹಾಶಾಸ್ತ್ರವನ್ನು ಯಾವ ಶಿಷ್ಯನು ಶ್ರೀಗುರುವಿನ ಮುಖದಿಂದ ತಿಳಿ ಕೊಂಡು ನಡೆಯುವದಿಲ್ಲವೋ ಮತ್ತು ಯಾವ ಗುರುವು ಶಿಷ್ಯನಿಗೆ ತಿಳಿಸುವದಿಲ್ಲವೋ ಅವರು ಇಬ್ಬರೂ ಭ್ರಷ್ಟರಾಗುತ್ತಾರೆ.

ಸುಪ್ರಭೇದಾಗಮ

॥ ೨೭ ॥ ಯಾರಾದರೂ ಷೋಡಷೋಪಚಾರಗಳಿಂದ ಪೂಜೆ ಮಾಡಿದರೆ ಆದರಿಂದ ತನಗೆ ಆನಂದವೂ ಆಗ ಬಾರದು, ಮಾಡದೆ ಇದ್ದರೆ ದುಃಖವೂ ಆಗ ಬಾರದು; ಆದರೆ ಎರಡೂ ಪಕ್ಷದಲ್ಲಿ ಒಂದೇ ಪವನಾಗಿ ಇರ ಬೇಕು. ॥೨೮॥ ಬಿಸಿಲು ಚಳಿಗಳಿಂದ ಉಂಟಾಗುವ ಸುಖದುಃಖಗಳ ವಿಷಯದಲ್ಲಿ ಕಲ್ಲಿನ ಗೊಂಬೆಯು ಹಾಗೆ ಆಗಿರ ಬೇಕು.

ಸುಪ್ರಭೇದಾಗಮ

ಕಾರೀ ಚ ಪಂಚಾಚಾರ್ಯಗುರುರ್ವರಃ ॥೮॥

॥ ವ್ಯಾಸಕೃತಭವಿಷ್ಯತ್ಪುರಾಣೇ ॥

ರಾಜಯೋಗೈಕಸಾಮ್ರಾಜ್ಯಸೌಭಾಗ್ಯಃ ಸರ್ವಸುಂದರಃ । ಮಾಯಾ ಕೋಲಾಹಲಮಹಾಮಾಯಾಮದವಿಭಂಜನಃ ॥ ೧॥ ಸ ಗುರುಃ ಸಮಸ್ತ ಜಗತಾಮಗೋಚರೋ ನಿಗಮಾಗಮಾರ್ಥನಿರವದ್ಯವಿಗ್ರಹಃ । ಮಮ ಚಾತ್ಮಬೋಧಜನಕಾಲ್ಲಮಪ್ರಭುಃ ಕಿಮುತಾತ್ಮನಾಂ ಸದೃಶಪ್ರಬೋಧವಾನ್ ॥ ೨ ॥

---

॥೮ ॥ ನನ್ನ ಊರ್ಧ್ವಮುಖದಿಂದ ಹುಟ್ಟಿದವನು ಆದ ನಿರಂಜನನೆಂಬ ಗಣಾಧ್ಯಕ್ಷನು ಶೂನ್ಯಪೀಠಕ್ಕೆ ಅಧಿಕಾರಿಯೂ ಪಂಚಾಚಾರ್ಯರಿಗೆ ಶ್ರೇಷ್ಠನಾದ ಗುರುವೂ ಆಗಿರುತ್ತಾನೆ.

ವ್ಯಾಸರು ಹೇಳಿದ ಭವಿಷ್ಯತ್ಪುರಾಣದಲ್ಲಿ.

॥ ೧ ॥ ಗುರುವು ರಾಜಯೋಗವು ಎಂಬ ಒಂದೇ ಸಾಮ್ರಾಜ್ಯದ ವೈಭವ ಉಳ್ಳವನೂ, ಎಲ್ಲಿಕ್ಕೂ ಹೆಚ್ಚು ಸುಂದರನೂ, ಮಾಯೆಯು ಗದ್ದಲವನ್ನೂ ಮಹಾಮಾಯೆಯ ಸೊಕ್ಕನ್ನೂ ಮುರಿಯುವಂಥವನೂ ಆಗಿರುತ್ತಾನೆ. ॥೨॥ ಅಂಥಾ ಗುರುವಾದ ಅಲ್ಲಮ ಪ್ರಭುವು ಯಾವತ್ತು ಲೋಕಗಳಿಗೆ ಅಗೋಚರನೂ, ನಿಗಮ ಮತ್ತು ಶಿವಾಗಮಗಳ ಅರ್ಥವೆಂಬ ನಿಷ್ಕಲಂಕವಾದ ದೇಹ ಉಳ್ಳವನೂ, ನನಗೆ ಶಿವನಿಗೆ ಕೂಡಾ ಆತ್ಮಜ್ಞಾನವನ್ನು ಉಂಟು ಮಾಡಿ ಕೊಡತಕ್ಕವನೂ ಆಗಿದ್ದಾನೆ; ಅಂದ ಮೇಲೆ ಇತರರಿಗೆ ಯೋಗ್ಯವಾದ ಬೋಧವನ್ನು ಉಂಟು ಮಾಡಿ ಕೊಡುವನು ಎಂಬಲ್ಲಿ ಆಶ್ಚರ್ಯವೇನು?

# ಮರಾಠೀ ಅರ್ಥ ಸಹಿತ

## ಮಾರಲಿಕ್ಕೆ ತಯಾರಾದ ಗ್ರಂಥಗಳು.

೧ ವೀರಮಾಹೇಶ್ವರಪ್ರಕರಣಂ } ಸ್ಕಂದ ಪುರಾಣ, ಕಿ॥ ೮ ಆಣೆ.
ಶಂಕರ ಸಂಹಿತೆಯಲ್ಲಿದು

೨ ದೀಕ್ಷಾದಿಕಥನಂ ( ಲಿಂಗಪುರಾಣದಲ್ಲಿದು ) ಕಿ॥ ೨ ಆಣೆ.

೩ ಸೂಕ್ಷ್ಮಾಗಮ ಕಿ॥ ೧೦ ಆಣೆ

೪ ಸಂಕ್ಷಿಪ್ತ ಲಿಂಗಪೂಜಾ ವಿಧಿ ಕಿ॥ ೨ ದುಡ್ಡು.

೫ ವೀರಶೈವಲಿಂಗಿಬ್ರಾಹ್ಮಣವಂಶಾವಳಿ ಪಟ ಕಿ॥ ೧ ಆಣೆ.

೬ ಶ್ರೀಸಿದ್ಧೇಶ್ವರಪುರಾಣ ಮರಾಠೀಭಾಷಾಂತರ ಕಿ॥ ೭ ಆಣೆ.

---

## ಗ್ರಂಥ ಸಿಗತಕ್ಕ ಠಿಕಾಣಾ.

ಸೋಲಾಪೂರದಲ್ಲಿ ರಾವಸಾಹೇಬ ವಾರದ ಇವರ ದುಕಾನದಲ್ಲಿ, ರಾ॥ ರಾ॥ ಚೋಳಪ್ಪಾ ಬೋರಾಮಣೀ ಇವರ ದುಕಾನದಲ್ಲಿ, ಮತ್ತು ಮುಂಬಯಿ, ವಿಜಾಪೂರ, ಕಲಬುರ್ಗಿಯಲ್ಲಿ ರಾವಸಾಹೇಬ ವಾರದ ಇವರ ದುಕಾನದಲ್ಲಿ ಸಿಗುತ್ತವೆ.

ಕನ್ನಡ ಅರ್ಥಸಹಿತ– ಸೂಕ್ಷ್ಮಾಗಮ, ವೀರಮಾಹೇಶ್ವರಪ್ರಕರಣಂ, ದೀಕ್ಷಾದಿಕಥನಂ, ಈ ಮೂರು ಗ್ರಂಥಗಳನ್ನು ವಿಜಾಪೂರದಲ್ಲಿ ಛಾಪಿಸಲಿಕ್ಕೆ ಕೊಟ್ಟಿರುವೆವು. ಮತ್ತು ವ್ಯಾಸಕೃತ ಭವಿಷ್ಯತ್ಪುರಾಣಾನ್ತರ್ಗತ ಪ್ರಭುಲಿಂಗಲೀಲೆ, ಪಾರಮೇಶ್ವರ ತಂತ್ರ, ಸುಪ್ರಬೋಧಾಗಮಾನ್ತರ್ಗತ ಪಂಚಾಚಾರ್ಯ ಪಂಚಮೋತ್ಪತ್ತಿ, ವೀರಶೈವಾಚಾರಪ್ರದೀಪಿಕೆ, ಉಪಯುಕ್ತವೇಚೆ, ಈ ಅಯ್ದುಗ್ರಂಥಗಳನ್ನು ಮರಾಠೀ ಅರ್ಥಸಹಿತವಾಗಿ ಬಾಲಬೋಧ ಅಕ್ಷರಗಳಲ್ಲಿ ಛಾಪಿಸುವದಕ್ಕೆ ಮುಂಬಯಿ, ಪುಣೆಗಳಲ್ಲಿ ಕೊಟ್ಟಿರುವೆವು. ಇವು ಸ್ವಲ್ಪ ದಿವಸಗಳಲ್ಲಿಯೇ ( ೩ ತಿಂಗಳಲ್ಲಿಯೇ ) ತಯಾರಾಗಬಹುದು ಅಪೇಕ್ಷೆ ಇದ್ದವರು ಪತ್ರ ಬರೆದು ನಮ್ಮ ಕಡಿಯಿಂದ ತರಿಸಿ ಕೊಳ್ಳಬೇಕು.

---

ಕನ್ನಡ ೬ ನೇ ಯತ್ತಾ ಮತ್ತು ಸಂಸ್ಕೃತ ಬಲ್ಲವರು ಶಿವಾಗಮ ವ್ಯಾಸೋಕ್ತ ಪುರಾಣ ಇವುಗಳ ಕನ್ನಡ ಮರಾಠೀ ಅರ್ಥ ಮಾಡತಕ್ಕ ಅಪೇಕ್ಷೆಯುಳ್ಳವರು ನಮ್ಮ ಕಡಿಗೆ ಅರ್ಜ ಮಾಡಿದ್ದಾದರೆ ಪರೀಕ್ಷಾ ಮಾಡಿ ಅವರವರ ಯೋಗ್ಯತಾನುಸಾರವಾಗಿ ಸಂಬಳವು ನೇಮಿಸಲಾದೀತು.